# ಕವನಸಂಗ್ರಹ

ವಿ. ಕೃ. ಗೋಕಾಕರ ಮುನ್ನುಡಿಯೊಂದಿಗೆ

ದಿನಕರ ದೇಸಾಯಿ

ಸಾಧನ ಮುದ್ರಣಾಲಯ
ಧಾರವಾಡ
೧೯೫೦

# ಕವನಸಂಗ್ರಹ

ವಿ. ಕೃ. ಗೋಕಾಕರ ಮುನ್ನುಡಿಯೊಂದಿಗೆ

ದಿನಕರ ದೇಸಾಯಿ

ಸಾಧನ ಮುದ್ರಣಾಲಯ

ಧಾರವಾಡ

೧೯೫೦

# ಅರಿಕೆ

ಈ ಸಂಗ್ರಹದಲ್ಲಿ ಸೇರಿಸಿರುವ ಕೆಲವು ಕವನಗಳು ಬೆಳಕಿಗೆ ಬಂದು ಅನೇಕ ವರುಷಗಳಾದವು, ಯೇಸುಗಿಂತ ದೇವ ಬಡವ, ಭಿಕ್ಷುಕರು, ಗಡಿಯಾರ, ಅಂಚೆಯವನು, ಗೊಲ್ಲನ ಬಾಳು, ನಾನು, ತರುಣರ ದಸರೆ, ಎಂಬುವು ವಿವಿಧ ಕವಿಗಳ ಕಾವ್ಯಮಾಲೆ (anthology) ಗಳಲ್ಲಿ ಪ್ರಕಟವಾಗಿವೆ. ಬೇರೆ ಕೆಲವು ಕವಿತೆಗಳು ನಿಯತಕಾಲಿಕೆಗಳಲ್ಲಿ ಅಚ್ಚಾಗಿದ್ದವು. ಹೀಗೆ ಕೆಲವು ಕವನಗಳನ್ನು ಬಿಟ್ಟರೆ, ಮಿಕ್ಕುಳಿದವುಗಳು ಇದೇ ಮೊದಲಾಗಿ ಬೆಳಕಿಗೆ ಬರುತ್ತವೆ.

ನನ್ನ ಕವನಗಳನ್ನು ಪುಸ್ತಕ ರೂಪದಲ್ಲಿ ಪ್ರಕಾಶನಕ್ಕೆ ತರುವೆನೆಂದು ಸಾಧನ ಮುದ್ರಣಾಲಯದ ಒಡೆಯರಾದ ಶ್ರೀ ಶೇಷಗಿರಿ ಕುಲಕರ್ಣಿರಾಯರು ಐದು ವರುಷಗಳ ಹಿಂದೆಯೇ ನನಗೆ ಪತ್ರ ಹಾಕಿದ್ದರು. ಆದರೆ ಈ ಕಾರ್ಯದಲ್ಲಿ ನನಗೆ ಸಾಕಷ್ಟು ಉತ್ಸಾಹವಿಲ್ಲದ್ದರಿಂದ ಪುಸ್ತಕ ಪ್ರಕಟವಾಗಲಿಲ್ಲ. ಇತ್ತೀಚೆಗೆ ನನ್ನ ಗೆಳೆಯರು ಕೆಲವರು ಪುಸ್ತಕ ಪ್ರಕಟವಾಗಬೇಕೆಂದೂ ನಾನು ಕನ್ನಡಮ್ಮನ ಸೇವೆಯನ್ನು ಅಲಕ್ಷಿಸಬಾರದೆಂದೂ ಆಗ್ರಹ ಹಿಡಿದರು. ಈ ಆಗ್ರಹದ ಫಲವೇ ಈ ಕವನ ಸಂಗ್ರಹ.

ಸಂಗ್ರಹದೊಳಗಿನ ಸುಮಾರು ೩೦ ಕವನಗಳು ಹಳೆಯವೆಂದು ಹೇಳಬಹುದು. ನಾನು ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ೧೯೨೭-೧೯೩೩ ಕಾಲಖಂಡದಲ್ಲಿ—ರಚಿತವಾದುವುಗಳು. ಉಳಿದ ಸುಮಾರು ೪೦ ಕವನಗಳು ಆಮೇಲೆ ಬರೆದವುಗಳು. 'ಹೆಸರು' ಕವನವು ಕೋಲ್‌ರಿಜ್ ಕವಿಯ ಗೀತವೊಂದರ ಅನುಕರಣವಾಗಿದೆ. 'ತೋಟಿಗ' ಕವನವು ರವೀಂದ್ರರ 'The Gardener' ದೊಳಗಿನ ಮೊದಲನೆಯ ಕವನ. ಮಹಾರಾಷ್ಟ್ರ ಕವಿ 'ಗೋವಿಂದಾಗ್ರಜ'ರ ಪ್ರಭಾವವನ್ನು 'ತರುಣರ ದಸರೆ' ಯಲ್ಲಿ ನೋಡಬಹುದು. 'ಬಡತನ' ಕವನವು ಪಂಚತಂತ್ರದಿಂದ ಎತ್ತಿಕೊಂಡದ್ದು. 'ಕೌದಿ' ಮತ್ತು 'ಗೋವಿಂದ' ಕವನಗಳು ನನ್ನ ಕೊಂಕಣಿ ಗೀತಗಳಲ್ಲಿಯ ಎರಡು ಕೃತಿಗಳ ಹೆಜ್ಜೆಯಲ್ಲಿ ರಚಿತವಾಗಿವೆ. ಉತ್ತರ ಕನ್ನಡ ಜಿಲ್ಹೆಯಲ್ಲಿ ನಡೆಯುತ್ತಿರುವ ರೈತ ಚಳವಳಿಯ ಪ್ರಚಾರಾರ್ಥವಾಗಿ ಬರೆದ ಪದಗಳಲ್ಲಿ 'ಕೆಂಪು ಬಾವುಟ' ಮತ್ತು 'ದೊಡ್ಡ ಒಡೆಯರು' ಇವುಗಳನ್ನು ಇಲ್ಲಿ ಆರಿಸಿಕೊಂಡಿದ್ದೇನೆ.

ಆಧುನಿಕ ಕನ್ನಡ ಸಾಹಿತಿಗಳಲ್ಲಿ ಪ್ರಸಿದ್ಧಿ ಹೊಂದಿದವರೂ ನನ್ನ ಗೆಳೆಯರೂ ಆದ ಶ್ರೀ ಗೋಕಾಕ ವಿನಾಯಕರಾಯರು ಈ ಸಂಗ್ರಹಕ್ಕೆ ಮುನ್ನುಡಿ ಬರೆದು ನನ್ನನ್ನು ಉಪಕೃತರನ್ನಾಗಿ ಮಾಡಿದ್ದಾರೆ. ಅವರಿಗೆ ನನ್ನ ವಂದನೆಗಳು. ಅವರ ಮುನ್ನುಡಿಯಿಂದ ನನಗೆ ಒಂದು ತರದ ಧೈರ್ಯ. ತಮ್ಮನಿಗೆ ಅಣ್ಣನ ಬೆಂಬಲವಿದ್ದಂತೆ. ಅಲ್ಲದೆ ಅವರು ಬರೆದ ಮುನ್ನುಡಿ ಓದುವ ಕುತೂಹಲದಿಂದ ಪುಸ್ತಕದ ಹೆಚ್ಚು ಪ್ರತಿಗಳು ಖರ್ಚಾಗಬಹುದೆಂಬ ಸ್ವಾರ್ಥ ಬುದ್ಧಿಯೂ ನನ್ನಲ್ಲಿತ್ತು. ಇವೆಲ್ಲ ಕಾರಣಗಳ ಮೂಲಕ ಅವರನ್ನು ಕೇಳಿಕೊಂಡದ್ದು.

ಈ ಕವನ ಸಂಗ್ರಹವನ್ನು ಬೆಳಕಿಗೆ ತರಲು ಶ್ರೀ ಕುಲಕರ್ಣಿ ಶೇಷಗಿರಿರಾಯರೇ ಕಾರಣರು. ೧೯೪೫ನೆಯ ಅಗಸ್ತು ತಿಂಗಳಲ್ಲಿ ನನಗೆ ಬರೆದ ಒಂದು ಪತ್ರದಲ್ಲಿ ಅವರು 'ನಿಮ್ಮ ಕವನಗಳನ್ನು ನಾನು ತುಂಬಾ ಮೆಚ್ಚಿದ್ದೇನೆ.' ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತೇನೆ ಎಂಬುದಾಗಿ ನನಗೆ ಪ್ರೋತ್ಸಾಹನೆ ಕೊಟ್ಟಿದ್ದರು. ಇದನ್ನು ನಾನು ಮರೆಯಲಾರೆ. ಕನ್ನಡ ಕಾವ್ಯಪ್ರಕಾಶನ ಕಾರ್ಯ ಸಹಾಸವೇ ಸರಿ. ಸಾಧಾರಣವಾಗಿ ಒಂದು ಸಾವಿರ ಪ್ರತಿ ಖರ್ಚಾಗಲಿಕ್ಕೆ ಪ್ರಕಾಶಕರು ಹತ್ತು ವರುಷ ಹಾದಿ ಕಾಯಬೇಕಾಗುತ್ತದೆ. ಅದರಲ್ಲಿಯೂ ವರಕವಿಯಲ್ಲದ ನನ್ನ ಕವನ ಸಂಗ್ರಹ ಓದುವವರ ಸಂಖ್ಯೆ ಇನ್ನೂ ಕಡಿಮೆಯಾಗಿರಬೇಕು. ಇಂಥ ಪ್ರಸಂಗದಲ್ಲಿ ಶ್ರೀ ಶೇಷಗಿರಿರಾಯರು ಪ್ರಕಾಶನಕ್ಕೆ ದುಡುಕಿದ್ದು ಅವರ ಕನ್ನಡ ಕಾವ್ಯಪ್ರೇಮವನ್ನು ವ್ಯಕ್ತಗೊಳಿಸುತ್ತದೆ. ಅವರಿಗೆ ನಾನು ತುಂಬ ಋಣಿಯಾಗಿದ್ದೇನೆ.

ಕವನಗಳನ್ನು ಓದಿ ಕನ್ನಡ ಹೃದಯವು ತುಸು ಆನಂದಪಟ್ಟು ಕುಣಿದರೆ, ನನಗೂ ಆನಂದ. ನಾನೂ ಕುಣಿಯಲಿಕ್ಕೆ ಅಣಿಯಾಗಿದ್ದೇನೆ. ಆದರೆ ಕಾರಣವಿಲ್ಲದೆ ವೃಥಾ ನನ್ನನ್ನು ಕುಣಿಸಬಾರದಾಗಿ ಬಿನ್ನಹ.

ಭಾರತ ಸೇವಕ ಸಮಾಜ,
ಗಿರಗಾಂವ್, ಮುಂಬಯಿ

**ದಿನಕರ ದೇಸಾಯಿ**

# ಕೆಳೆನುಡಿ

(೧)

ನನ್ನ ಮಾನ್ಯ ಸ್ನೇಹಿತರಾದ ಶ್ರೀಮಾನ್ ದಿನಕರ ದೇಸಾಯರು ತಮ್ಮ ಮುದ್ದಾದ ಈ ಕವನಸಂಗ್ರಹಕ್ಕೆ ಒಂದು ಮುನ್ನುಡಿ ಬರೆಯಬೇಕೆಂದರು. 'ಅಣ್ಣ–ತಮ್ಮ' ಎಂದು ಜನ್ಮಸಿದ್ಧ ಸೌಜನ್ಯದಿಂದ ನನ್ನನ್ನು ಗೌರವಿಸಿದರು. ಅವಳಿ–ಜವಳಿ ಹುಟ್ಟಿದ್ದಾಗ ಯಾರು ಅಣ್ಣ ಯಾರು ತಮ್ಮ ಎಂಬುದನ್ನು ನಿರ್ಣಯಿಸುವದು ಸುಲಭವಲ್ಲ. ನಾವಿಬ್ಬರೂ ಇಂದಿನ ಕನ್ನಡದ ಸುಪ್ರಭಾತ ದಲ್ಲಿ ಕೂಡಿಯೇ ಬಾಯ್ದೆರೆದೆವು. ಇಂದಿಗೂ ಕನ್ನಡದ ಮೇಳಗೀತದಲ್ಲಿ ದನಿಗೂಡಿಸುತ್ತಿದ್ದೇವೆ. ಆ ದಶಕದ ಕವಿಗಳ ಕೃತಿಗಳೆಲ್ಲ ಬಹುಶಃ ಈಗ ಸಂಗ್ರಹರೂಪವಾಗಿ ಉಪಲಬ್ಧವಾಗಿವೆ. ಶ್ರೀಮಾನ್ ದೇಸಾಯರೊಬ್ಬರೆ ಪಂಜರವನ್ನು ತಪ್ಪಿಸಿದ ಗಿಳಿಯಂತೆ ಮಾಸಿಕಗಳ ಮುಗಿಲಲ್ಲಿ ಇಲ್ಲವೆ ಗಿಳಿವಿಂಡಿ ನಲ್ಲಿ ಒಂದು ಗಿಳಿಯಾಗಿ ಹಾರಾಡುತ್ತಿದ್ದರು. ಅವರ ಕವನಗಳನ್ನು ಹೀಗೆ ಒಂದು ಪುಸ್ತಕರೂಪದಲ್ಲಿ ಸಂಗ್ರಹಿಸಿರುವದಕ್ಕಾಗಿ ನಾನು ಗೆಳೆಯ ಕುಲಕರ್ಣಿ ಶೇಷಗಿರಿರಾಯರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ.

ಶ್ರೀ ದಿನಕರ ದೇಸಾಯರನ್ನು ನಾನು ಮೊದಲು ಕಂಡದ್ದು ಈಗ ಇಪ್ಪತ್ತೊಂದು ವರ್ಷಗಳ ಹಿಂದೆ, ಬೆಳಗಾವಿಯ ಸಾಹಿತ್ಯ ಸಮ್ಮೇಲನದಲ್ಲಿ. ಆಗ ಅವರು ಮೈಸೂರಿನಲ್ಲಿ ಇನ್ನೂ ವಿದ್ಯಾರ್ಥಿಗಳಾಗಿದ್ದರು. 'ಬಿ. ಎಮ್. ಶ್ರೀ.' ಅವರೂ ಶ್ರೀ. ಮಾಸ್ತಿಯವರೂ ವ್ಯಾಸಪೀಠದ ಮೇಲೆ ವಿರಾಜಮಾನರಾಗಿದ್ದಾಗ ತಮ್ಮ ಒಂದು ಮುದ್ದು ಕವನವನ್ನು ಅಂದು ತೋರಿಸಿ, ಕನ್ನಡ ಕಲಿಯಲಿಚ್ಛಿಸುವವರು 'ನನ್ನಂತೆ ಮೈಸೂರಿಗೆ ಬರಬೇಕು? ಎಂದು ಮುಂತಾಗಿ ಹೇಳಿದರು. ಅವರು ಹಾಗೆ ಹೇಳುವಾಗ 'ಬಿ. ಎಮ್. ಶ್ರೀ.' ಅವರ ಮುಖ ಮೋಹಕವಾಗಿ ಅರಳಿತ್ತು. ನಾನು ಆ ಮುಖವನ್ನೇ ನೋಡುತ್ತ ಕುಳಿತಿದ್ದೆ.

ಮುಂದೆ 'ತಳಿರಿ' ನಲ್ಲಿ ಮೈಸೂರಿನ ಉಳಿದ ತರುಣ ಕವಿಗಳೊಡನೆ ದಿನಕರ ದೇಸಾಯರ ಒಂದೆರಡು ಕವಿತೆಗಳೂ ಅಚ್ಚಾದವು. 'ದೀನಗಿಂತ ದೇವ ಬಡವ' ಎಂಬ ಅವರ ಕವನ ಆ ಸಂಗ್ರಹದ ಶ್ರೇಷ್ಠ ಕವಿತೆಗಳಲ್ಲಿ ಒಂದಾಗಿತ್ತು. ಆ ಸಂಗ್ರಹವನ್ನು ವಿಮರ್ಶಿಸುವಾಗ ನಾನು ಆ ಕವನವನ್ನು ಮುಕ್ತಕಂಠನಾಗಿ ಹೊಗಳಿದೆ.

ನಾನು ಫರ್ಗುಸನ್ ಕಾಲೇಜಿಗೆ ಪ್ರಾಧ್ಯಾಪಕನೆಂದು ಹೋದಾಗ ಶ್ರೀ. ದೇಸಾಯರೂ ಮುಂಬಯಿಯಿಂದ ಪುಣೆಗೆ ಬರುತ್ತಿದ್ದರು. ಆಗ ಅವರು ತಮ್ಮ ಅಭ್ಯಾಸವನ್ನು ಮುಗಿಸಿ "ಭಾರತ ಸೇವಕ ಸಮಾಜ" ವನ್ನು ಆಜನ್ಮ

ಸೇವಕರಾಗಿ ಸೇರುವ ವಿಚಾರದಲ್ಲಿದ್ದರು. ಆ ವಿಷಯವನ್ನು ನಾವು ಚರ್ಚಿಸುತ್ತಿದ್ದೆವು. ಕೂಡಿದಾಗ ಒಬ್ಬರೊಬ್ಬರ ಕವಿತೆಗಳನ್ನು ಕೇಳುತ್ತಿದ್ದೆವು.

ಮುಂದೆ ನಾನು ವಿಲಾಯತಿಯಿಂದ ತಿರುಗಿ ಬಂದಾಗ ಆಗಲೆ ಆಜನ್ಮ ಸೇವಕರಾಗಿ ಶ್ರೀ. ದೇಸಾಯರು ಮುಂಬಯಿಯಲ್ಲಿ ಕೆಲಸ ಮಾಡುತ್ತಿದ್ದರು. ಆದೇ ನನ್ನ 'ಸಮುದ್ರದಾಚೆಯಿಂದ' ಪ್ರಕಟವಾಗಿತ್ತು. ಅದರಲ್ಲಿ ನಾನು ಹಡಗದ ಮೇಲಿನ ಒಡಪಾಯಿಯಾದ 'ಕಾಡೋರ್ಜ್' ಎಂಬವನ ಬಗ್ಗೆ ಬರೆದಿದ್ದೆ. ಭೆಟ್ಟಿಯಾದಾಗ—ಪಿ. ಎಂಡ್. ಓ. ಕಂಪನಿ ಹಡಗಗಳ ಮೇಲೆ ದುಡಿಯುತ್ತಿರುವ ಎಲ್ಲ ಗೋವನೀಜ್ ಮೇಟರರ ಒಂದು ಸಂಘವನ್ನು ಮಾಡಿರುವದಾಗಿಯೂ ಕಾಡೋರ್ಜ್‌ನಂತಹ ಅನೇಕರ ಕಲ್ಯಾಣಕ್ಕಾಗಿ ದುಡಿಯುತ್ತಿರುವದಾಗಿಯೂ ಶ್ರೀ ದೇಸಾಯರು ನನಗೆ ಹೇಳಿದರು ನಾನು ಕೌತುಕಗೊಂಡೆ. ಮುಂದೆ ಅವರು ಸಮುದ್ರದ ಮೇಲಿನ ಭಾರತೀಯ ಕೂಲಿಗಳನ್ನು ಕುರಿತು ಇಂಗ್ಲಿಷಿನಲ್ಲಿ ಬರೆದ ಗ್ರಂಥವು ಪ್ರಸಿದ್ಧವಾಯಿತು. ಆದರಂತೆ ಭಾರತೀಯ ಶಿಕ್ಷಣಕ್ರಮದ ಒಂದೆರಡು ಮಟ್ಟಗಳನ್ನು ಕುರಿತು ಸಹ ಅವರು ಬರೆದರು ಅವರ ಭಾರತ ಸೇವೆ ತನುಮನಧನಪೂರ್ವಕವಾಗಿ ಸಂತತವಾಗಿ ನಾಗಿತ್ತು; ಸಾಗಿದೆ; ಸಾಗಲಿ.

ಶ್ರೀ. ದಿನಕರ ದೇಸಾಯರ ಜೀವನಲತೆಯಲ್ಲಿ ಅರಳಿದ ಎರಡು ಮಂದಾರಗಳು ಇವು: ಒಂದು ಅವರ ಕಾವ್ಯ: ಇನ್ನೊಂದು ಅವರ ದೇಶಸೇವೆ. ವಿನಯದಿಂದ ಬಾಗಿ ಬಳುಕುವ ಲತೆ ಅದು. ಅದಕ್ಕೆ ವೃಥಾಡಂಬರ ಬೇಡ. ಮೈತುಂಬ ಹೂ ಬೇಡ. ಬರಿ ಎರಡು ಹೂಗಳಲ್ಲಿ ತನ್ನ ಅಮೃತತ್ವವನ್ನು ಅರಳಿಸಿ ಅದು ಕೃತಕೃತ್ಯವಾಗುತ್ತಲಿದೆ. ಆದರೆ ಆ ಹೂಗಳು **ಮಂದಾರ**ಗಳು. ಸಾವಿರ ಮಲ್ಲಿಗೆಗಳನ್ನು ಮಿಕ್ಕಿ ಅವುಗಳ ಸೌರಭವು ಸೂಸಿದೆ. ತಾವು ಬರೆದ ಕವಿತೆಗಳನ್ನು ಬನ್ನಿಗಿಡವು ಬಿಡುವ ಹೂವಿಗೆ ಅವರು ಹೋಲಿಸಿದ್ದಾರೆ. ಇದು ಅವರಲ್ಲಿ ರಕ್ತಗತವಾದ ವಿನಯದ ಪ್ರತೀಕ. ಎರಡು ಕೋಗಿಲೆಗಳು ಕುಳಿತ ಮಾಮರವೆಂದರೇ ಅವರ ಜೀವನವಾಗಿದೆ.

(೨)

ಈ ಕವನಗಳ ರೀತಿ ಏನು? ಯಾವ ತಾಳಲಯವನ್ನನುಸರಿಸಿ ಪ್ರತಿಭೆಯು ಇಲ್ಲಿ ಕುಣಿದಿದೆ?

ಈ ಕವನಗಳಲ್ಲಿಯ ಮೊದಲನೆಯ ಲಕ್ಷಣ ಅವುಗಳಲ್ಲಿಯ ಭಾವ ನಿರ್ಭರತೆ. ಅನಿಸಿದ ಅನಿಸಿಕೆ ಕಾವ್ಯಮಯವಹುದೋ ಅಲ್ಲವೋ ಎಂಬ

ಶಂಕೆಯೇ ಇಲ್ಲಿ ಏಳುವದಿಲ್ಲ. ಭಾವದ ಉತ್ಕಟತೆಯಲ್ಲಿಯೇ ಅದರ ಕಾವ್ಯಮಯತೆಯು ಉಗಮವಿದೆ. ಒಂದೊಂದು ಭಾವನೆಯೂ ವ್ಯಕ್ತಿತ್ವದ ಆಳದೊಳಗೆ ಮಿಂದು ಬರುತ್ತದೆ.

ಈ ಕವನಗಳ ಎರಡನೆಯ ಲಕ್ಷಣವೆಂದರೆ ಅವುಗಳ ನೇರತೆ, ಸಹಜಾಭಿ-ವ್ಯಕ್ತಿ. ಸುಲಭವಾಗಿ ನೇರವಾಗಿ ಎದೆ ಹೋಗುವ ಭಾಷೆಯಲ್ಲಿ ಅವರ ಕಾವ್ಯಲಕ್ಷ್ಮಿಯು ಪ್ರಕಟಳಾಗುತ್ತಾಳೆ. ಅವರ ಜನ್ಮಸ್ಥಾನವಾದ ಉತ್ತರ ಕನ್ನಡದ ಗಿರಿನಿರ್ಝರಗಳಂತೆ ಅವರ ಕಾವ್ಯವು ಲಲಿತವಾಗಿದೆ. ಮೋಹಕ ವಾಗಿದೆ, ಅಚ್ಚುಕಟ್ಟಾಗಿದೆ. ಇದ್ದ ಭಾವವೆಲ್ಲ ಮನಮುಟ್ಟುವಂತೆ ಎದೆತುಂಬಿ ವ್ಯಕ್ತವಾಗುತ್ತದೆ. ಅಲ್ಲಿ ಸಂದಿಗ್ಧವಾದುದೇನೂ ಇಲ್ಲ; ಅಸ್ಪಷ್ಟವಾವುದೂ ಇಲ್ಲ. ಇಂಥ ಸೌಕುಮಾರ್ಯದ ಕಾಂತಿಗೆ ಕುಂದಿಲ್ಲ. ಅದರ ಔಚಿತ್ಯಕ್ಕೆ ಬಾಧೆಯೇ ಇಲ್ಲ. ಹಿತಮಿತವಾದ ಶೈಲಿ-ಛಂದಗಳನ್ನು ಕೂಡಿಕೊಂಡು ಒಂದು ಕೋಗಿಲೆಯ ಹಾಡಿನಂತೆ ಇಂಪಾಗಿ ಅವರ ಕಾವ್ಯವು ಕಿವಿಯಮೇಲೆ ಬೀಳುತ್ತದೆ. ಅದರ ವ್ಯಕ್ತಿತ್ವದ ಸ್ಫುಟ ಲಕ್ಷಣಗಳನ್ನು ಮರೆಯುವದೇ ಸಾಧ್ಯವಿಲ್ಲ. ಕಳೆದ ಇಪ್ಪತ್ತು ವರ್ಷಗಳಲ್ಲಿ ಅನೇಕ ಪ್ರಯೋಗಗಳು ಕನ್ನಡ ದಲ್ಲಿ ಆಗಿರುವದುಂಟು. ಆದರೆ ಕನ್ನಡಕ್ಕೆ ಇಂದಿಗೂ ಒಬ್ಬನೇ ದಿನಕರ ನೆಂದು ಹೇಳದೆ ಗತಿ ಇಲ್ಲ. ಅವರಂತೆ ಇನ್ನಾರು ಹಾಡಿಯೇ ಇಲ್ಲ.

(೩)

ಅವರ ಕಾವ್ಯದ ವಿವಿಧ ಲಹರಿಗಳಲ್ಲಿ ಅನನ್ಯತಮವಾದ ಒಂದು ಲಹರಿ ಯೆಂದರೆ ಶಿಶುಗೀತೆಗಳಂತೆ ಕಾಣುವ ಪ್ರಕಾರ. ಆದರೆ ಅವು ಶಿಶುಗೀತೆಗಳಲ್ಲ. ಶಿಶುಗೀತೆಗಳಂತೆ ಸಹಜವಾಗಿ ರೂಪವನ್ನು ಪಡೆದ ಸುಂದರ ಕವಿತೆಗಳು. ಈ ಕವಿತೆಗಳಲ್ಲಿ ಒಂದು ನೀತಿಪಾಠವನ್ನು ಕವಿ ಕಲಿಸುತ್ತಿರುವಂತೆ ಭಾಸವಾಗು ತ್ತದೆ. ಆದರೆ ಅದು ಬರಿ ನೀತಿಪಾಠವಲ್ಲ. ಹೃದಯದಲ್ಲಿ ನೇರವಾಗಿ ಉಗಮಿಸಿ ಹೃದಯವನ್ನು ಮುಟ್ಟುವ ರತ್ನಪಾಠ. ವಿಮಾನ, ಉಗಿಬಂಡಿ, ಕೌದಿ, ಕಾಲಿನ ಜೋಡು, ಕಸಗುಡಿಸುವ ಪಂಚಮರು, ಭಿಕ್ಷುಕರು, ಅಂಚೆಯವನು, ಗಡಿಯಾರ, ಸಾಬೂನು: — ಇವು ಅವರ ಕೆಲವು ಕವನಗಳ ಶಿರೋನಾಮಗಳು. ಅವುಗಳ ತಂತ್ರ ಒಂದೇ. ಆ ವಸ್ತುಗಳ ವಿಜ್ಞಾನ ವನ್ನಾಗಲಿ ಸ್ವಭಾವ ವಿಶೇಷವನ್ನಾಗಲಿ ಕವಿಯು ಕಾವ್ಯಮಯವಾಗಿ ಬಣ್ಣಿಸಿ ಆ ವಸ್ತುವಿನಲ್ಲಿ ಅಡಕವಾದ ತತ್ವವನ್ನು ಎತ್ತಿತೋರಿಸುತ್ತಾನೆ. ಚಳಿ ಯಾದರು ಸಮ, ಮಳೆ ಬಂದರು ಸಮ,—ವಿಮಾನಕ್ಕೆ, ಲಗುಲಗು ಬುಗಬುಗು ಹೊರಟು ಉಗಿಬಂಡಿಯು ಯಂತ್ರಯುಗದ ಚಾಮುಂಡಿಯಾಗುತ್ತದೆ

ಹೆಣ್ಣಿನ ಸೀರೆಯನ್ನೂ ಗಂಡಿನ ಧೋತ್ರವನ್ನು ಕೂಡಿಸಿಕೊಂಡ ಕೌದಿ— 'ಗಂಡೂ ಹೆಣ್ಣೂ ಕೂಡಲು ಬಾಳು' ಎಂದು ಸಾರುತ್ತದೆ. ಕಾಲಿನ ಜೋಡು ಸೇವಾಧರ್ಮವನ್ನು ಸಾರುತ್ತದೆ. ಅಂಚೆಯವ 'ಎಲ್ಲಾ ಸುದ್ದಿಗಳೊಂದೇ ನಮಗೆ' ಎಂದು ಹೇಳುತ್ತಾನೆ! ಗಡಿಯಾರವು ಕರ್ಮರಹಸ್ಯದ ಶಾಂತಿಯನ್ನು ತಿಳಿಸುತ್ತದೆ. ಸಾಬೂನನ್ನು ನೆನೆದಾಗ—

'ಹೊರಗಿನ ಬಣ್ಣವು ಕೆಂಪಾಗಿದ್ದರು
ಹಳದೀ ಸೀಲೀ ಎಂಥದು ಇದ್ದರು,
ಹೃದಯದ ನೊರೆ ಸತತವು ಬಿಳಿ ಶುದ್ಧವು!'

ಎನ್ನುತ್ತಾನೆ ಕವಿ! ಸಣ್ಣ ಸಣ್ಣ ಮಾತಿನೊಳಗಿಂದ, ಬಣ್ಣ ಬಣ್ಣದ ಇಂದ್ರ ಧನುಸ್ಸು ಮೇಲಕ್ಕೇಳುತ್ತದೆ.

ಇವುಗಳ ಜೊತೆಗೆ ನಿಲ್ಲತಕ್ಕ ಇನ್ನೊಂದು ಗುಂಪೆಂದರೆ,—ಗೋವಿಂದ ಯಮುನೆ, ಸೂಳೆ, ತಂಬೂರಿದಾಸ, ಕಾಳಿಗೌಡ, 'ದೊಡ್ಡ ಒಗೆ ನೀರು,' ತಾಯಿ,— ಮೊದಲಾದ ಸ್ವಭಾವಪರ ಗೀತಗಳು. ಒಂದೊಂದು ಮಾದರಿಯ ಸ್ವಭಾವ ಒಂದೊಂದರಲ್ಲಿ ಪ್ರಕಟವಾಗಿದೆ ಇಲ್ಲಿ, ಹಳ್ಳಿಗೆ ಗೋಸಿಯ ಕಂದನಾದ ಗೋವಿಂದನ ಚಿತ್ರಣ ಮೋಹಕವಾಗಿದೆ. ಯಮುನೆಯು ಮೈಬಣ್ಣವೇನೋ ಕರಿದು. ಆದರೆ ಆಕೆಯ ಹೃದಯದ ಪ್ರೇಮ ಹೊಳೆಯುತ್ತದೆ.

"ಕುಣಿಯುವದೊಂದೇ ಕುಣಿಸುವದೊಂದೇ ಸಂಗೀತದ ಶಕ್ತಿ" ಎಂದು ಸಂಗೀತದ ದಾಸ ಹಾಡಿದರೆ ಪುಣ್ಯಪುರುಷನಾದ ಕಾಳಿಗೌಡನ ಬಗ್ಗೆ ಬರೆಯುತ್ತ—

"ಏನು ಹೇಳಲಿ ಜನರ ಸಂದಣಿ
ಪುಣ್ಯಪುರುಷನ ಯಾತ್ರೆಗೆ;
ಇಷ್ಟು ಜನ ಕೂಡುವದು ಕಷ್ಟವು
ನಾಡದೇವರ ಜಾತ್ರೆಗೆ" ಎಂದು ಕವಿ ಉದ್ಗಾರ ತೆಗೆಯುತ್ತಾನೆ.

ಇದೇ ಮಾನವೀಯತೆಯ ತಿರುಳನ್ನೇ 'ತಾಯಿ'ಯಲ್ಲಿ ಕಾಣುತ್ತೇವೆ.

" ತಾಯಿಯು ದೇವರಿಗಿಂತಲು ಮೇಲು,
ದೇವರ ಮೊಲೆಯಲಿ ದೊರೆವುದೆ ಹಾಲು? "

ಈ ಜನ ನೆಲೆನಿಂತ ನಾಡು ಯಾವುದು? ಕವಿಯು ಅದನ್ನೂ ರಮ್ಯವಾಗಿ ಬಣ್ಣಿಸಿದ್ದಾನೆ. ಉತ್ತರ ಕನ್ನಡ, ವೀರ ಮೈಸೂರು, ಮೈಸೂರು, ಕನ್ನಡ ನಾಡಿನ ಕೊಂಕಣ, ನಮ್ಮ ಕಡಲ ನಾಡು,—ಈ ಕವನಗಳು ಒಂದು ಸಹಜರಮಣೀಯ ನಿಸರ್ಗಪ್ರೇಮದಿಂದ, ತಾಯ್ನೆಲದ ಪ್ರೀತಿಯಿಂದ ತುಂಬಿವೆ. ಅಲ್ಲಲ್ಲಿ ತಾಯ್ನೆಲದ ಘನತೆಯನ್ನೂ ಚೆಲುವನ್ನೂ ಕವಿಯು ಅಭಿಮಾನದಿಂದ ನೆನೆಯುತ್ತಾನೆ.

ಒಂದು ಕವನವು ಇಲ್ಲಿ ತಾನೇ ತಾನಾಗಿ ನಿಂತಿದೆ. ಅದಾವುದೆಂದರೆ,— **'ನೀಲಿಯ ಕೋಳಿಗಳು'**. 'ಗೋವಿಂದ' ದ ಮಾದರಿಯ ತಿಳಿಹಾಸ್ಯ ಇಲ್ಲಿ ಒಂದು ಕಥೆಯ ರೂಪವನ್ನು ತಾಳಿ ನಾಡಜನತೆಯ ಜೀವನದ ಮಾನವೀಯ ಸೀಮೆಯನ್ನು ಸುಂದರವಾಗಿ ಚಿತ್ರಿಸುತ್ತದೆ. ಕವಿಯ ಕಣ್ಣಿಗೆ ನೀಲಿಯ ಮರುಡು ನಂಬಿಗೆಯೂ ಅಷ್ಟೆ; ತಿಮ್ಮನ ತುಂಟತನವೂ ಅಷ್ಟೆ. ಎರಡನ್ನೂ ನೋಡಿ ಶುದ್ಧಾಂತಃಕರಣದಿಂದ ಉಲ್ಲಸಿತನಾಗಿ ಕವಿಯು ನಕ್ಕುಬಿಡುತ್ತಾನೆ. ಅಂಥ ಕವನಗಳನ್ನು ಶ್ರೀ. ದೇಸಾಯಿಯರು ಇನ್ನಷ್ಟು ಬರೆದರೆ ಚೆನ್ನು. ಉದಾತ್ತ ವಿನೋದದ ಸಂಸ್ಕಾರ ಸಹಜವಾಗಿ ಓದುಗರ ಹೃದಯವನ್ನು ಹೊಕ್ಕೀತು.

ಭಾರತದ ಸಂಸ್ಕೃತಿಯನ್ನು ಕವಿಯು ಅಭಿಮಾನಪೂರ್ವಕವಾಗಿ ನೆನೆಯುತ್ತಾನೆ. ರಾಜಾರಾಮಮೋಹನರ ಕರ್ಮದ ನೆರಳಿನಲ್ಲಿ ಧರ್ಮ ಚಿಗಿತಿದೆ. ವೀರಗಲ್ಲು ಗತವೈಭವದ ಬಿಂಬವಾಗಿದೆ. ಕುಮಾರವ್ಯಾಸನ ಕವನ, ಬೀಸುವ ಪವನ, ಭಾವದ ಭವನ. ಆದರೆ ಭಾರತ ಭೂಮಿಯ ಸತತನ? ಅದು ವಿಶ್ವಕುಟುಂಬದ ಜಡತನವೇ ಸರಿ. ಬಂಗಾಲದ ಬರಗಾಲದ ಸಮಯದಲ್ಲಿ ಹದ್ದಿಗೂ ಓಕರಿಕೆ ಬರುವಂತಾಯಿತು. ಹರಿಜನರು,— ಹೆಸರಿಗೆ ಮಾತ್ರ ಹರಿಜನರು. ಈ ಹಿರಿಯ ಸಾಮಾಜಿಕ ಸಮಸ್ಯೆಗಳಿಗೆ ಉತ್ತರವೆಲ್ಲಿ?

ಹೀಗೆ ಕವಿಯ ಸಾಮಾಜಿಕ ಪ್ರಜ್ಞೆಯು ಕುದುರಿ ಸಮತೆಯೆಡೆಗೆ ಅವನ ಒಲವು ಹರಿಯುತ್ತದೆ. 'ತರುಣರ ದಸರೆ' ಯ ನೆನಪಾಗುತ್ತದೆ. ಯುವಕನಿಗೇಕೆ ಬಾವಿಯ ನೀರು? ಅದು ಮುದುಕರಿಗಿರಲಿ' ಯುವಕನು ಸೇರಲಿ ವನವಾಸ ವನು,—'ಹುಲಿಗಳ ಜೊತೆಯಲಿ ಬಾಳುವನವನು!' ಬಾರ್ಡೋಲಿಯ ವೀರ ಒಕ್ಕಲಿಗರ ಧೈರ್ಯವನ್ನು ಕವಿ ನೆನೆಯುತ್ತಾನೆ. ಹೊಟ್ಟೆಯ ವ್ಯಾಜ್ಯ— ಅನ್ನದ ಸಮಸ್ಯೆ—ಇಂದಿನ ಹಿರಿ ಸಮಸ್ಯೆಯಾಗಿದೆ, ಕನಸಿನೊಳಗಿನ ಮೀನು ಗಾರ ನನಸಿನ ಸೃಷ್ಟಿಯಲ್ಲಿಯೆ ಯಕ್ಷಪ್ರಶ್ನೆ, ಅವನ ಸ್ಥಿತಿ ಸುಧಾರಿಸಿದ ಹೊರತು ಜಗತ್ತು ಪ್ರಗತಿಪರವಾಗಲಾರದು. 'ನೀಲಿಯ ಕೋಳಿಗಳ' ಲ್ಲಿ ಮೃದು ಹಾಸ್ಯ ತುಂಬಿದ್ದರೆ ಈ ಕಥನಕವನದಲ್ಲಿ ಕರುಣೆ-ವಿಷಾದಗಳು ಎದೆ ತಂತಿಯನ್ನು ಮೀಟುತ್ತಿವೆ. ಪ್ರಗತಿ—ರಥಕ್ಕೆ ಎರಡು ಗಾಲಿಗಳಂತಿದ್ದ ರೈತ—ಕಾರ್ಮಿಕರ ಕಷ್ಟಗಳನ್ನು ಕುರಿತು ಕವಿ ಬರೆಯುತ್ತಾನೆ. 'ಕೂಲಿಯ ಸುಖವೇ ಮಾನವ ಧರ್ಮ' ವೆಂಬ ಮಾತು ಮನದಟ್ಟಾಗುತ್ತದೆ. ಉತ್ತರ ಕನ್ನಡದ ಕಚ್ಚೆಯು 'ಲಂಗೋಟಿಯೊಳೇ ಗಾಂಧಿ ಮಹಾತ್ಮಾ!' ಎಂಬ ಪಾಠ ವನ್ನು ಸೂಚಿಸುತ್ತದೆ. ಹತ್ತು ಯುಗದ ಪಿತ್ತ ಕಾರಿಹೋದಂತೆ ಚೀನದ ಕ್ರಾಂತಿ ದಿಕ್‌ಪಥದಲ್ಲಿ ಕಾಣುತ್ತದೆ.

ಆದರೆ ಬರಿ ಒಂದು ರಾಜಕೀಯ ಮೀಮಾಂಸೆಯಿಂದ ಇಲ್ಲವೆ ಒಂದು 'ವಾದ' ದಿಂದ ವ್ಯಕ್ತಿಗಾಗಲಿ ಸಮಾಜಕ್ಕಾಗಿ ವಿಮೋಚನೆ ಸಾಧ್ಯವಿಲ್ಲ ಸಂಸ್ಕೃತಿ–ಜೀವನದ ಕೆಚ್ಚು–ಅದಕ್ಕಾಗಲಿ ಬೆಳೆದು ಬರಬೇಕಾಗುತ್ತದೆ. ಆಂತರಿಕ ಪ್ರಜ್ಞೆ, ಭಾವನೆಯ ಸಯ, ವಿಚಾರದ ಆಳ,–ಇವೆಲ್ಲ ಇದಕ್ಕೆ ಆವಶ್ಯಕ. ಕವಿಯು ಇಂತಹ ವಿಚಾರಪೂರ್ಣ ಕವನಗಳಲ್ಲಿ ತನ್ನ ಕೆಚ್ಚನ್ನು ತೋರಿಸಿದ್ದಾನೆ. ಮಳೆಯಿಂದ ಹರುಷದ ಬೆಳೆ ಬಂದಿದೆ. ಆದರೆ ಬಡವನ ಗುಡಿಸಲಲ್ಲಿ ಕೆಸರೇ ಕೆಸರು! 'ವಾರದ ಪದ' ನಯವಾದ ವಿಡಂಬನೆಯಿಂದ ತುಂಬಿದೆ. 'ಆಳಂಬೆ' ಎಂಬ ಕವನದಲ್ಲಿ ಶಿಶುಗೀತೆಯ ಸಹಜತೆಯೂ ವಿಚಾರಗಾಂಭೀರ್ಯವೂ ಮೋಹಕವಾಗಿ ಬೆರೆತುಕೊಂಡಿವೆ. 'ತುದಿಮೊದಲು ಹಿರಿಚಿಂತೆ ನೆರಳಿನಂತೆ' ಎಂದು ಬಾಳುವ ಚಿಂತೆ ಹಾಗು ಮರಣದ ಚಿಂತೆಯನ್ನು ಕವಿಯು ನೆನೆಯುತ್ತಾನೆ. ನರನ ಉದರಂಭರಣಕ್ಕಾಗಿ ನಡೆಯುವ ವಿಚಿತ್ರ ಪ್ರಾಣಿಪ್ರದರ್ಶನವನ್ನು ವರ್ಣಿಸುತ್ತಾನೆ. ನದಿಯ ಗತಿ ಮಾನವ ಜೀವನದ ಗತಿಯನ್ನು ಪ್ರತಿಬಿಂಬಿಸುತ್ತದೆ.

ಹೀಗೆ ವಿಚಾರಪರನಾದಾಗೆಲ್ಲ ಕವಿಯನ್ನು ಮೂರು–ನಾಲ್ಕು ಆದರ್ಶಗಳು ಆಳವಾಗಿ ಆಕರ್ಷಿಸುತ್ತವೆ. ಕೋಟ್ಯಾವಧಿ ಜೀವಿಗಳಿದ್ದರೂ ಜೀವ ಒಂದೇ. ಎಲ್ಲ ಜೀವಿಗಳೂ ದೇವನ ಅವತಾರ. ದೇವರು ನೊರೆಹಾಲನ್ನು ಬೇಡುವದಿಲ್ಲ. 'ಅದು ದನದ ಕರುವಿಗಿರಲಿ; ನನಗಿರಲಿ ನಿರ್ಮಲಾಂತಃಕರಣ' ಎಂದು ಹೇಳುತ್ತಾನೆ. ಮಣ್ಣುಗೊಂಬೆಯ ಆಟದಲ್ಲಿ ಕಂದ ತಾಯಿಯನ್ನು ಕೆಲವು ಸಮಯ ಮರೆತಿರುತ್ತಾನೆ. ಆದರೆ ಕೊನೆಗೆ ಅವನಿಗೆ ನೆನಪಾಗುವದು ತಾಯಿಯದೇ. ನರನಿಗೂ ದೇವರ ನೆನಪು ಹೀಗೆಯೆ ಆಗುವದು. ಜೀವ ದೇವ ನೆಡೆಗೆ ನಡೆದುಹೋಗುವಾಗ, — ದೇಹವಿದು ಬರಿ ಪಯಣದ ಬಟ್ಟೆಯಂತೆ.

ಆದರೆ ದೇವನನ್ನು ನೆನೆಯುವದೆಂದರೆ ವಿರಕ್ತನಾಗಿ ಸಮಾಜಕ್ಕೆ ಬೆನ್ನು ತೋರಿಸುವ ನಿವೃತ್ತಿಪ್ರಿಯನಾಗಬೇಕೆಂದಲ್ಲ:

'ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ?
ದೀನಗಿಂತ ದೇವ ಬಡವ–
ನೆಂದು ಬಗೆದೆಯಾ?' ಎಂಬ ಕವಿಯ ಪ್ರಶ್ನೆ ಎಂತಹರನ್ನೂ ಕೆಣಕ

ಬಲ್ಲದು, ಅಂದದ ಚಂದದ ಭೂಮಿಗೆ ಬಂದು ಸ್ವರ್ಗವನ್ನು ನೆನೆಸುವದೇಕೆ?

'ಇಹಲೋಕದೊಳೇ ನಂಬಿಗೆಯಿದ್ದರೆ
ನರಕವ ನಾ ಕಾಣೆ' ಎಂದು ಕವಿ ಹೇಳುತ್ತಾನೆ. ಸತಿ, ಪತಿ,

ಮಗು ಹಾಗು ಜಗ ಕಂಗಳ ಮುಂದಿನ ದೇವರಿದ್ದಂತೆ. ದೇವರ ಮುತ್ತಿನ ಸವಿ ಎಲ್ಲೆಡೆಗಿದೆ. ಮೋಡಗಳು ಸಹ ಮಳೆ ಹನಿ ತಂದು ಭೂಮಿಗೆ ಅಭಿಷೇಕ ಮಾಡುತ್ತಿವೆ. 'ಪ್ರೇಮವೊಂದೇ ಜಗದ ಮೂಲ ತತ್ವದ ನೀತಿ-ನನ್ನ ರಂಗಿಯ ಮೊಗದ ಮಂದಹಾಸದ ರೀತಿ! ಇಣಚಿಯಂತೆ ಸಣ್ಣವನಿದ್ದಾಗ ಮರವೇರುವ ಬಾಲ್ಯದ ಸವಿ ನೆನಪನ್ನೂ ಕವಿ ನೆನೆಯುತ್ತಾನೆ. ಮಗುಗಳ ಆಟದ ಮೋಹಕತೆ ಎಷ್ಟು!

"ಅಜ್ಜಿಯು ಮಲಗಲು ಆಕೆಯ ಕಾಲಿಗೆ
ಗೆಜ್ಜೆಯು ಸುತ್ತುವೆ ನೀ ಕಳ್ಳಾ!"

ತಾಯಿಯ ತಾಯ್ತನ ಎಂಥದು!

"ಯಾವಳ ಹಿಡಿಯಲಿ ತೊಟ್ಟಿಲ ದಾರ
ಆಕೆಯ ಉಡಿಯಲಿ ಜಗದೋದ್ಧಾರ! ಇಂಥ ಚೆಲುವು

ತುಂಬಿದ್ದ ಪೃಥ್ವಿಗಿಂತ ಹೆಚ್ಚಿನದೇನು? ಅದನ್ನು ನೆನೆದಾಗ ಲೋಕಕಲ್ಯಾಣಕ್ಕಿಂತ ಹೆಚ್ಚಿನದೇನೂ ಇಲ್ಲವೆಂದು ಕವಿಗೆ ಮನವರಿಕೆಯಾಗುತ್ತದೆ:--

"ನನ್ನ ದೇಹದ ಬೂದಿ-ಗಾಳಿಯಲಿ ತೂರಿ ಬಿಡಿ,
ಹೋಗಿ ಬೀಳಲಿ ಭತ್ತ ಬೆಳೆಯುವಲ್ಲಿ"

ಎಂದು ಕವಿಯು ಸಮರ್ಪಣ ಭಾವದ ತುದಿಯನ್ನು ಮುಟ್ಟುತ್ತಾನೆ.

ಕಾವ್ಯವು ಕವಿಯನ್ನು ಆಕರ್ಷಿಸಿದ ಇನ್ನೊಂದು ಸತ್ಯಸೌಂದರ್ಯ. ಕಾವ್ಯವು ದೇವಗೆಂದು ಚಿತ್ತಭಿತ್ತಿಯಿಂದ ತಂದ ಕವನದಾರತಿ. ಆದರೆ ಈ ಆರತಿ ದೇವರ ಒಡವೆಗಳನ್ನು ದೇವರಿಗೇ ಕೊಟ್ಟಂತೆ, ಏಕೆಂದರೆ ಪ್ರತಿಭೆ ದೈವಾಯತ್ತ; ಪ್ರತಿಭೆ ಪ್ರತಿಬಿಂಬಿಸುವ ಸೌಂದರ್ಯವು ದೇವನಿರ್ಮಿತ ಸೃಷ್ಟಿಯಲ್ಲಿಯದು. ಕವನವೇ ಕವಿಯ ಕಮಲೆ, ಅಮರಸಖಿ, ಇಂಥ ಕವಿಯು ಬಾಳೇ ಕವಿ ಬಯಸುವ ಗೊಲ್ಲನ ಬಾಳು:

"ಗೊಲ್ಲರು ಊದುವ ಕೊಳಲಿನ ದನಿಯಲಿ
ಜೀವವು ನಲಿನಲಿದಾಡುವದು!"

'ನಾನು ಸಾಯಲು ನನ್ನ ಕವನಗಳ ಮರೆತು ಬಿಡಿ, ಎಂದು ಕವಿ ಹೇಳುತ್ತಾನೆ. ಆದರೆ ಇಂಥ ಮುದ್ದು ಕವನಗಳನ್ನು ಮರೆಯುವದು ಹೇಗೆ? ಕವಿಯೇ ಹೇಳಿದಂತೆ ಎಲ್ಲೆಲ್ಲಿಯೂ ದೇವನ ಭಾವಪವನ ಬೀಸುತ್ತಿದೆ ಆ ಪವನದ ಒಂದು ಪಾವನ ಸುಳಿ ಈ ಕಾವ್ಯಮಾಲೆ. ವರಕವಿಯಲ್ಲವೆಂದು ವಿನಯದಿಂದ ಹೇಳಿದ ಕವಿಯ ಪ್ರಸಾದ ವಾಣಿಯು ಈ ಸಂಗ್ರಹದಲ್ಲೆಲ್ಲ ನಮ್ಮನ್ನು ತಣಿಸುತ್ತದೆ.

(೪)

ಈ ಕವನಗಳ ಬಗ್ಗೆ ಇನ್ನೊಂದು ಮಾತು ಹೇಳಬೇಕು. ಕವಿಯ ವ್ಯಕ್ತಿತ್ವ ಇಲ್ಲಿ ಒಂದು ಹವಣನ್ನರಿತಿದೆ, ಹದಕ್ಕೆ ಬಂದಿದೆ. ಯಾವ ಒಂದೇ ಒಂದು ಮಾತನ್ನೂ ಕವಿಯು ದೀರ್ಘಕ್ಕೊಯ್ಯುವದಿಲ್ಲ. ಇಲ್ಲಿ ದೇವಭಕ್ತಿ ಹಾಗು ಅಚಿಂತ್ಯೋಪಾಸನೆಯಿದೆ. ಆದರೆ ಅದು ಅನುಭಾವವಾಗಿ ಗಹನವಾಗಿಲ್ಲ. ಇಲ್ಲಿ ಸಮಾಜಸೇವೆಯ ಉದಾತ್ತ ಪ್ರೇರಣೆಯಿದೆ. ಆದರೆ ಅದು ಗಡುಚಾಗಿ ಒಂದು 'ವಾದ'ವಾಗಿಲ್ಲ. ಭೂಮಿತಾಯಿಯಲ್ಲಿ ಒಂದು ಆಳವಾದ ಶ್ರದ್ಧೆಯಿದೆ. ಆದರೆ ಮಿತಿಯನ್ನರಿಯದ ವಿಡಂಬನೆಗೆ ಅದು ಆಸ್ಪದ ಕೊಟ್ಟಿಲ್ಲ. ಹಾಸ್ಯವಿದೆ; ಆದರೆ ಅದು ಗಹಗಹಿಕೆಯಾಗಿಲ್ಲ, ಕರುಣೆಯಿದೆ; ಅದು ಆರ್ತತೆಯಾಗಿಲ್ಲ. ಒಲುಮೆ-ನಿಸರ್ಗ ಪ್ರೀತಿಗಳಿವೆ. ಆದರೆ ಅವು ತುಂಬಿ ಬಂದ ಮಾನವೀಯ ಭಾವನೆಗಳೇ ಹೊರತು ಅನುಭಾವದಂತಹ ರಹಸ್ಯಗಳಲ್ಲ. ಹೀಗೆ ಒಂದು ಸಹಜ, ಮಧುರ, ಗಮ್ಯ ಸಮನ್ವಯವನ್ನು ಕವಿಯ ವ್ಯಕ್ತಿತ್ವವು ಸಾಧಿಸಿದೆ. ಇಂದು ಎಲ್ಲರಲ್ಲಿಯೂ ಇರಬೇಕಾದ ಸಂಸ್ಕೃತಿಗೆ ಒಂದು ಚೆಲುವ ಕನ್ನಡಿ ಹಿಡಿದಂತಿದೆ ಈ ಕವನಸಂಗ್ರಹ.

ಶೈಲಿಯಲ್ಲಿಯೂ ಹಾಗೆಯೇ. ಸಹಜವಾಗಿ ಮಾತನಾಡುತ್ತ ಆಡುತ್ತ–

" ದೀನಗಿಂತ ದೇವ ಬಡವ—
ನೆಂದು ಬಗೆದೆಯಾ? ",
" ತಾಯಿಯು ದೇವರಿಗಿಂತಲು ಮೇಲು,
ದೇವರ ಮೊಲೆಯಲಿ ದೊರೆವುದೆ ಹಾಲು? "

ಎಂಬ ಉಕ್ತಿಗಳಲ್ಲಿಯ ಅಪೂರ್ವ ಕಾಂತಿಯನ್ನು ಕವಿಯು ನೀಡುತ್ತಾನೆ. ವ್ಯಕ್ತಿತ್ವದ ಆ ಸುಂದರ–ಬಂಧುರ, ರಮ್ಯ–ಗಮ್ಯ ಸಮನ್ವಯ, ಶೈಲಿಯ ಈ ಸೌಕುಮಾರ್ಯ ಹಾಗು ಪ್ರಸಾದ,—ಈ ಎರಡೂ ಗುಣಗಳು ಶ್ರೀ ದಿನಕರ ದೇಸಾಯರ ಪ್ರತಿಭೆಗೆ ಆಧುನಿಕ ಕಾವ್ಯದಲ್ಲಿ ಒಂದು ಅನನ್ಯ ಸ್ಥಾನವನ್ನು ಕಲ್ಪಿಸಿ ಕೊಟ್ಟಿವೆ. ಅವರ ದೇಶಸೇವೆಯಂತೆ ಅವರ ಕಾವ್ಯ ಪ್ರತಿಭೆಯೂ ನಾಡಿನ ತುಂಬೆಲ್ಲ ಬಹು ಕಾಲ ಕಂಪುವಿಡಿದು ಗಮಗಮಿಸಲಿ. ಅವರ ಕಾವ್ಯದ ರಮ್ಯ-ಗಮ್ಯತೆಗಳು ಇನ್ನೂ ವಿಸ್ತಾರವಾಗಿ ಹಬ್ಬಲಿ.

ರಾಜಾರಾಮ್ ಕಾಲೇಜು
ಕೊಲ್ಲಾಪುರ

**ವಿ. ಕೃ. ಗೋಕಾಕ**



ಶ್ರೀ ದತ್ತಾತ್ರೇಯ ಸಾಂಬ ದೇಸಾಯಿ

( ಕವಿಯ ತಂದೆ )

# ಅರ್ಪಣ

ನನ್ನ ತಂದೆ **'ದತ್ತಣ್ಣ'** ನವರಿಗೆ

—ದಿನು

# ಪರಿವಿಡಿ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೮ | ಪ್ರೂಣ್ಯ | ಪುಣ್ಯ |
| ೩ | ೧೭ | ಕುದುರಗಳ | ಕುದುರೆಗಳ |
| ೨೦ | ೭ | ಭೇಧ | ಭೇದ |
| ೪೯ | ೫ | ವಣಗಲು | ಒಣಗಲು |
| ೬೯ | ೩ | ನೀಡುವುವಲ್ಲದೆ | ನೀಡುವುದಲ್ಲದೆ |
| ೯೩ | ೧ | ಹಾಡಿನ | ನಾಡಿನ |
| ೯೩ | ೩ | ನೋಟವು | ತೋಟವು |
| ೧೧೦ | ೧೬ | ಮುಳಗೆ | ಮುಳುಗೆ |
| ೧೧೭ | ೨೩ | ಕಲಿಯಗ | ಕಲಿಯುಗ |
| ೧೨೫ | ೨ | ಜೆಲ್ಹೆಗೆ | ಜಿಲ್ಹೆಗೆ |
| ೧೨೫ | ೧೨ | ಜೆಲ್ಹೆಯು | ಜಿಲ್ಹೆಯು |

---

# ಕಾಣಿಕೆ

ದೇವಗಿಂದು ಭಾವಪೂಜೆ,
ಮಂಗಳಾರತಿ;
ಚಿತ್ತಭಿತ್ತಿಯಿಂದ ತಂದ
ಕವನದಾರತಿ.

ಮುಗಿಲು ಬಟ್ಟೆ, ಭೂಮಿ ತಟ್ಟೆ,
ವಿಶ್ವ-ಮೂರುತಿ,
ತಟ್ಟೆಯಲ್ಲಿ ಸುಮದ ರಾಜಿ,
ಪೂಣ್ಯ ಭಾರತಿ.

ಪರ್ವತಗಳ ಶ್ರೇಣಿಯಿಂದ
ಗುಡಿಯು ಕಟ್ಟುವೆ;
ಗಗನ-ವಸ್ತ್ರದಿಂದ ಮೇಲೆ
ಹೊದಿಕೆ ಹಾಕುವೆ.

ಭೃಂಗ ರವವು ವೇದಮಂತ್ರ;
ಗುಂಗುಗು ಭೇರಿಯು;
ಪುಣ್ಯ ಸ್ನಾನವಾಗಲೆಂದು
ಮೇಘ-ವಾರಿಯು.

ಮೋಡದಲ್ಲಿ ಮಾಯವಾದ
ಮುಗಿಲ ಹೂವನು
ಮಿಂಚುಗೋಲಿನಿಂದ ಪುಡುಕಿ,
ನಿನ್ನಲಿಡುವೆನು !

ಇಂದ್ರಚಾಪ ಮಾರ್ಗದಿಂದ
ಮುಗಿಲನೇರುವೆ;
ಚಂದ್ರನನ್ನು ಒಡೆದು, ತಿಲಕ
ಹಣೆಗೆ ಹಚ್ಚುವೆ.

ಮಂದಪವನ ಬೀಸಣಿಕೆಯು;
ಕಡಲು ದರ್ಪಣ !
ನನ್ನ ತೊದಲುನುಡಿಯ ಕವನ
ನಿನಗೆ ಅರ್ಪಣ !

ಇಂತು ನಾನು ನಿನಗೆ ಕೊಡುವ
ಕಿರಿಯ ಕಾಣಿಕೆ !
ಮಗುವು ಭಾವಸ್ವಪ್ನದಲ್ಲಿ
ನೇಯ್ದ ಮಾಲಿಕೆ !

\+ + + + +

ಮರುಳ ನಾನು; ನಿಜವ ಮರೆತೆ.
ಕ್ಷಮಿಸು ದೇವನೆ,
ನಿನ್ನ ಒಡವೆಗಳನೆ ನನ್ನ—
ವೆಂದು ಕೊಡುವೆನೆ !

# ವಿಮಾನ

ನೀಲ ದಿಗಂತಕೆ ಮೋರೆಯನೆತ್ತಿ,
ಸುಂಟರ ಗಾಳಿಯನೂ ಬದಿಗೊತ್ತಿ,
ಮುಗಿಲೊಳಗೋಡುವೆ ಮೋಡವ ಹತ್ತಿ.
ಯಂತ್ರ-ವಿಹಂಗಮ ವಾಹನವೇ.

ಐದು ಖಂಡಗಳ ಭಾರವ ಹೊತ್ತು
ಮೂರೇ ದಿನದಲಿ ವಿಶ್ವದ ಸುತ್ತು!
ಜಗದಾಕಾರವು ನಿನಗೇ ಗೊತ್ತು!
ಯಂತ್ರ-ವಿಹಂಗಮ ವಾಹನವೇ.

ಎಣ್ಣೆಯ ಕುಡಿದು ಪರಾಕ್ರಮ ತೋರಿ.
ಪರವಶ ಯೋಜನ ನಿಮಿಷಕೆ ಹಾರಿ,
ತೇಲುವ ನೀನೇ ಗಗನ-ವಿಹಾರಿ;
ಯಂತ್ರ-ವಿಹಂಗಮ ವಾಹನವೇ.

ಚಳಿಯಾದರು ಸಮ, ಮಳೆ ಬಂದರು ಸಮ,
ಒಂದೇ ವೇಗದೊಳೋಡುವ ತವ ಕ್ರಮ
ಅದ್ಭುತರಮ್ಯವು ಶ್ರೇಷ್ಠ ವಿಹಂಗಮ;
ಯಂತ್ರ-ವಿಹಂಗಮ ವಾಹನವೇ.

ಕೋಟಿ ತುರಂಗಗಳ ವೇಗವು ವ್ಯರ್ಥ!
ನಿನ್ನ ಪರಾಕ್ರಮ ನಿಜ ಪುರುಷಾರ್ಥ!
ವ್ಯೋಮಸಾಗರದಿ ನೀನೇ ಧೂರ್ತ!
ಯಂತ್ರ-ವಿಹಂಗಮ ವಾಹನವೇ.

ನವ ಶತಮಾನದ 'ಪ್ರಗತಿಯ' ತೋರಣ!
ಹೃದಯ ಕಠೋರವು ಮನ ಬಲು ದಾರುಣ!
ಹೊಸ ಪರಿ ಯುದ್ಧಕೆ ನೀನೇ ಕಾರಣ!
ಯಂತ್ರ-ವಿಹಂಗಮ ವಾಹನವೇ.

ಕಾಳಗದಲಿ ನೀ ಕ್ರೂರ ಕಠಿನ ಯಮ;
ಬೆಂಕಿಯ ಸುರಿಮಳೆಗರೆದು, ವಿಹಂಗಮ,
ಮನೆಮನೆಗಳ ನೀ ಮಾಡುವೆ ನೆಲಸಮ,
ಯಂತ್ರ–ವಿಹಂಗಮ ವಾಹನವೇ.

ದ್ವಾಪರ ಯುಗದಲಿ ಪುಷ್ಪ–ವಿಮಾನ;
ಕಲಿಯುಗದೊಳಗೇ ಯಂತ್ರಕೆ ಸ್ಥಾನ!
ಮಾನವ ಸಂಸ್ಕೃತಿಯಾಯಿತು ಕ್ಷೀಣ!
ಯಂತ್ರ–ವಿಹಂಗಮ ವಾಹನವೇ.

———

# ನನ್ನ ರಂಗಿ

ನನ್ನ ಪ್ರೇಮದ ರಂಗಿ,
ನೀನು ಬಾಡದ ಹೂವು;
ನಿನ್ನ ಹಾಸದ ಭಂಗಿ—
ಯಿಂದ ನಿಲುವುದು ನೋವು.

ಹತ್ತು ವರುಷದ ಹಿಂದೆ
ನಾ ನಿನ್ನ ಕೈಹಿಡಿದೆ;
ಅಂದಿನಿಂದಲು ಇಂದೆ
ಪ್ರೇಮರಸವನೆ ಕುಡಿದೆ.

ನನಗೆ ನಿನ್ನದೆ ಹುಚ್ಚು
ದಿನದಿನಕೆ ಹೆಚ್ಚುವುದು.
ಕಮಲದಂತೆಯೆ ಮುಚ್ಚು
ಅರಳರಳಿ ಮುಚ್ಚುವುದು.

ಮುಚ್ಚಿ ಅರಳಲು, ಮತ್ತೆ
ಹೆಚ್ಚು ತಿಳಿತಿಳಿಯಾಯ್ತು,
ಝರಿ ಹರಿದು ತುಸು ಬತ್ತೆ
ಇದ್ದ ಮಲಿನವು ಹೋಯ್ತು.

ನಾವಿಬ್ಬರೂ ಜೋಡಿ
ಪಾರಿವಾಳದ ಜಾತಿ,
ಖಗದಂಪತಿಯ ನೋಡಿ
ನಾವು ಕಲಿತೆವು ಪ್ರೀತಿ

ನನ್ನ ಒಲುಮೆಯು ರೆಕ್ಕೆ
ನೀನು ಹಾರುವದಕ್ಕೆ;
ಹಾರಾಡಿ ನೀ ನಕ್ಕೆ
ಹೃದಯಗಗನದಿ ಚುಕ್ಕೆ.

ಪ್ರೇಮವೊಂದೇ ಜಗದ
ಮೂಲ ತತ್ವದ ನೀತಿ
ನನ್ನ ರಂಗಿಯ ಮೊಗದ
ಮಂದಹಾಸದ ರೀತಿ.

ನನ್ನ ಪ್ರೇಮದ ರಂಗಿ,
ನೀನು ಬಾಡದ ಹೂವು,
ನಿನ್ನ ಹಾಸದ ಭಂಗಿ–
ಯಿಂದ ನಿಲುವುದು ನೋವು.

---

# ಭಾರತ ಭೂಮಿಯ ಬಡತನ

ಭಾರತ ಭೂಮಿಯ ಬಡತನವು
ವಿಶ್ವಕುಟುಂಬದ ಜಡತನವು !

ಧರ್ಮದ ಭೂಮಿ ಚಿರಂತನವು;
ಉದರದಿ ಕರ್ಮದ ಮಂಥನವು !

ಕೋಟಿ ಮಾನವರ ಕಣ್ಣೀರು
ಹರಿದು ತುಂಬಲದು ಮುನ್ನೀರು !

ಕಾಳಿನ ಕಣಜವು ತುಂಬಿದರೂ
ಹಸಿವೆಯು ತೀರದು ನುಂಗಿದರೂ !

ಬರಗಾಲೆಂಬುದು ಬೇರಿಲ್ಲಾ;
ಯಾವಾಗಲು ತುತ್ತಿಗೆ ಇಲ್ಲಾ !

ಕೋಟಿ ಕೋಟಿ ಜನ ಬಾಲಕರು
ಹುಟ್ಟಿದ ಕ್ಷಣವೇ ಸಾಯುವರು !

ತೊಟ್ಟಿಲು ಮಸಣಕೆ ದೂರುವದು;
ಮರಣವು ಜನನಕೆ ಸೇರುವುದು !

ಹುಟ್ಟು-ಸಾವುಗಳ ಮಿತಿಯಿಲ್ಲ;
ಬದುಕಿದವರಿಗೂ ಗತಿಯಿಲ್ಲ !

ಬ್ರಹ್ಮದೇವನಿಗು ಬಿಡುವಿಲ್ಲ;
ಯಮದೇವನಿಗೂ ತಡವಿಲ್ಲ !

ಪಾಪಪುಣ್ಯಗಳ ವೇದಾಂತ !
ಬಡತನವೆಂಬುದು ಸಿದ್ಧಾಂತ !

ನಡುಹಗಲಲಿ ಯಾರದು ತಪ್ಪು ?
ಯೌವನದಲಿ ಬರುವುದು ಮುಪ್ಪು !

ಚಡಪಡಿಸಿದರೂ ನರಜೀವ
ಹೋಗದು ! ಪ್ರಾಣ ಚಿರಂಜೀವ !

ಉಸಿರೆಳೆದಾಡುವ ಜೀವನವು
ಸತ್ತೂ ಬದುಕಲು, ಪಾವನವು !

ಭಾರತ ಭೂಮಿಯ ಬಡತನವು
ವಿಶ್ವಕುಟುಂಬದ ಜಡತನವು !

---

# ದೀನಗಿಂತ ದೇವ ಬಡವ!

ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ ?
ಹರಿಯ ಒಲುಮೆ ಪಡೆದು ಪುಣ್ಯ
ಗಳಿಸುತಿರುವೆಯಾ ?

ಹುಚ್ಚ, ನೀನು ಹಳ್ಳಿಗೋಡು;
ದೀನ ಜನರ ಪಾಡ ನೋಡು;
ಇರಲು ಗುಡಿಲು ಇಲ್ಲವಲ್ಲ !
ಹೊಟ್ಟೆ ತುಂಬ ಅನ್ನವಿಲ್ಲ !
ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ ?

ಹರಿಯು ವಿಶ್ವರೂಪವನ್ನು
ಮರೆತು ಬಿಟ್ಟೆಯಾ ?
ಜಗಕೆ ಗೋಡೆ ಹಾಕಿ ಗುಡಿಯ
ಕಟ್ಟ ಬಲ್ಲೆಯಾ ?
ದೀನಗೊಂದು ಗೂಡು ಸಾಕು;
ದೇವಗೊಂದು ವಿಶ್ವ ಬೇಕು;
ಮಣ್ಣ ಹುಲ್ಲ ಸಣ್ಣ ಗೂಡು—
ಬಡವಗದುವೆ ಸಿರಿಯು ಬೀಡು.
ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ ?
ದೀನಗಿಂತ ದೇವ ಬಡವ—
ನೆಂದು ಬಗೆದೆಯಾ ?

# ಹಿಂದಿನ ದಿನಗಳು

ಹಳೆಯ ಹಿಂದಿನ ದಿನಗಳೆಂದರೆ
ಮನಕೆ ಪಚ್ಚದ ಊಟವು;
ನೆನಪು ಬಂದರೆ, ಕನಸಿನಂತೆಯೆ
ಕಾಣುವುದು ಹಳೆ ನೋಟವು.

ನಾನು ಸಣ್ಣವ, ನನ್ನ ತಂಗಿಯು
ಇನ್ನು ಚಿಕ್ಕವಳಿದ್ದಳು;
ಅಂದಿನಾ ದಿನಗಳಲಿ ಆಕೆಗೆ
ಯಾರು ಹೋಲದೆ ಇದ್ದರು.

ಅವಳ ಮುದ್ದಿನ ಮೊಗವು ಚೆಂದವು
ತಾನೆ ಅರಳಿದ ಹೂವದು,
ಬಾಳ ಬಿಸಿಲಿನ ತಾಪವಿಲ್ಲದ
ತಾಯ ನೆರಳಿನ ಹೂವದು.

ಆಕೆ, ನಾನೂ, ನೆರೆಯ ಕಾಮೂ,
ಅಲ್ಲಿ-ಇಲ್ಲಿಯ ಮಕ್ಕಳು
ತೋಟದಲಿ ಸುಳಿದಾಡುತಿದ್ದೆವು
ಬರುವ ವರೆಗೂ ಕತ್ತಲು.

## ಹಿಂದಿನ ದಿನಗಳು

ಗೇರ ಹಣ್ಣಿನ ಮರದ ಬುಡದಲಿ
ಹಿಗ್ಗಿ ಹಾರುತಲಿದ್ದೆವು;
ಹಕ್ಕಿ ಕೊರಕಿದ ಹಣ್ಣಿಗೂ ಸಹ
ನಾವು ಕೋರುತಲಿದ್ದೆವು!

ಹಕ್ಕಿಯಂತೆಯೆ ಹಾರಿ, ಹಣ್ಣನು
ತಿನ್ನುವಾಸೆಯು ಮನದಲಿ;
ಇಣಚಿಯಂತೆಯೆ ಹಣಕಿ, ಮರವನು
ಹತ್ತುವಾಸೆಯು ಕ್ಷಣದಲಿ.

ಹೊಳೆಯ ದಂಡೆಯ ಮರಳಿನಲಿ ನಾವ್
ಆಟಪಾಟವ ಹೂಡಲು,
ನೀರಿನಂಚಿಗೆ ಮೀನು–ಮರಿಗಳು
ಸುಳಿದು ಬಿಸಿಲಲಿ ಹೊಳೆಯಲು--

ಮೀನಿನಂತೆಯೆ ಮಿಂಚಿ ನೀರಲಿ
ಈಜುವಾಸೆಯು ಮನಕದು;
ಈಜಿ ಮುಂದಕೆ ದೂರ ಹೋಗುವ
ಕಡಲ ಕಾಣುವ ಕನಸದು.

ಮನೆಯ ಮುಂದಿನ ಗುಡ್ಡ ದೊಡ್ಡದು.
ಅದರ ತುದಿಯನು ಮುಟ್ಟಲು,
ಏನು ಹೆರುಷವೊ ಏನು ಸರಸವೊ
ನಾವು ಕೈಗಳ ತಟ್ಟಲು!

ಕಡಲ ಮೇಲಿನ ಹಡಗ ತೋರಲು
ಮನಸಿಗೊಂದೇ ಆಸೆಯು—
ದೂರ ದೇಶಕೆ ಹೋಗಿ ಮರಳುವ
ಕನಸಿನಲ್ಲಿ ಪಿಪಾಸೆಯು.

ಹಳೆಯ ಹಿಂದಿನ ಚಂದ ದಿನಗಳು
ಇಂದಿಗವು ಕನಸಾದವು;
ಚಿಕ್ಕತನದಲಿ ಚೊಕ್ಕ ಕನಸವು
ಇಂದು ಮಸಮುಸಕಾದವು !

---

# ಹೆಸರು

ಹೆಸರಾವುದು ನನ್ನಯ ಪ್ರಿಯತಮೆಗೆ ?
ಗಂಡ: — ಯಾವುದು ಹೆಸರಲಿ ಕರೆಯಲಿ ನಿನಗೆ ?
ಕಮಲಾ, ವಿಮಲಾ, ಲೀಲಾ, ಮಾಲಾ,
ನಲಿನೀ, ದಲಿನೀ, ಸೀತಾ, ಗೀತಾ,
ಎಂಬೀ ಸಕ್ಕದ ಹೆಸರೊಳಗೊಂದನು
ಆರಿಸಿಕೊಂಬುದು ಓ ನನ್ನರಸಿ.

ಕಸ್ತೂರಿ ಕನ್ನಡದಿಂಪಿನ ಹೆಸರುಗ–
ಳಿದ್ದೂ ಸಕ್ಕದ ನಾಮಗಳೇಕೆ ?
ಅನ್ನುವೆಯಾದರೆ ಇವುಗಳ ಕೇಳು :
ನೀಲೀ, ನಿಂಗೀ, ಮಾದೀ, ಗೋದೀ,
ನಾಗೀ, ಬಾಗೀ, ಬೆಳ್ಳೀ, ಹೂವೀ,
ಆರಿಸಿಕೊಂಬುದು ಓ ನನ್ನರಸಿ,

ಹೆಂಡತಿ: — ಹೆಸರೊಳಗೇನಿದೆ ಓ ನನ್ನರಸಾ,
ಹೆಸರೆಂದರೆ ಬರಿ ಮಾತಿನ ಸರಸ !
'ಕಮಲೇ' ಅನ್ನಲು ತಾವರೆ ನಾನೇ ?
'ನಾಗೀ' ಅನ್ನಲು ನಾಗಿಣಿಯೇನೇ ?
ಯಾವುದು ಹೆಸರಾದರು ನನಗೇನು?
ನಿಮ್ಮವಳೆನ್ನಿರಿ, ಹಿಗ್ಗುವೆ ನಾನು !

———

# ಗೋವಿಂದ

ಅಂಗಿಯ ಮೇಲದು ಶಾಯಿಯ ಚುಕ್ಕಿ.
ಜೇಬಿನಲ್ಲಿ ಚಕ್ಕಲಿ ಅವಲಕ್ಕಿ,
ನಾಲಿಗೆ ಬಹಳೇ ಹೋಗಿದೆ ಸೊಕ್ಕಿ !
ಬಂದ ಬಂದನವ ಗೋವಿಂದಾ.

ಮಾಮಿಡಿಯೊಂದೂ ಮರದೊಳಗಿಲ್ಲ;
ಪೇರಲ ಹಣ್ಣೂ ಕಾಣುವದಿಲ್ಲ;
ಆತನು ಹುಡುಕದ ಗಿಡಮರವಿಲ್ಲ !
ಬಂದ ಬಂದನವ ಗೋವಿಂದಾ

ಸಂಗಡ ಹುಡುಗರ ತಂಡವ ಕಟ್ಟಿ.
ಊರಿನ ನಾಲ್ಕೂ ಗಡಿಯನೆ ಮುಟ್ಟಿ,
ತಂಟೆಯ ತರುವುದಕವನೇ ಗಟ್ಟಿ !
ಬಂದ ಬಂದನವ ಗೋವಿಂದಾ

ಕುಂಬಾರನ ಗಡಿಗೆಗೆ ಗುರಿ ಹಿಡಿದು,
ಮಣ್ಣಿನ ಕೊಡವನು ಠಣ್ಣನೆ ಒಡೆದು,
ಅಡಗಿದ ಸ್ಥಳದಿಂ ಬೇಗನೆ ನಡೆದು
ಬಂದ ಬಂದನವ ಗೋವಿಂದಾ.

ಹುಣಸೆಯ ಮರವನು ತುದಿವರೆಗೇರಿ,
ಹುಲ್ಲಿನ ಬಣವೆಗೆ ಡಬ್ಬನೆ ಹಾರಿ,
ಅತುಲ ಪರಾಕ್ರಮ ಜಗದಲಿ ತೋರಿ
ಬಂದ ಬಂದನವ ಗೋವಿಂದಾ.

## ಗೋವಿಂದ

ಮೂಲೆಮೂಲೆಗೂ ಅವನದೆ ಕಣ್ಣು:
ಬೇಲಿಯ ಅಂಚಿನ ಅನಾಸು ಹಣ್ಣು !
ಆತನ ಬಾಯಲಿ ಬೀಳಲಿ ಮಣ್ಣು !
ಬಂದ ಬಂದನವ ಗೋವಿಂದಾ.

ಮಂಗನವೊಲು ಟೊಂಗೆಯ ಹಾರಾಟ,
ಕುರಿಮರಿ ಪರಿಯಲಿ ಜಿಗಿಜಿಗಿದಾಟ,
ಸಂಜೆಯ ವರೆಗೂ ಬರಿ ಚೆಲ್ಲಾಟ!
ಬಂದ ಬಂದನವ ಗೋವಿಂದಾ.

ನೆಟ್ಟನೆ ಮೂಗೂ, ಉದ್ದನ ಜುಟ್ಟು,
ಜಟ್ಟಿಯ ತೆರದಲಿ ದೇಹದ ಕಟ್ಟು,
ಇವನೇ ಶ್ಯಾಮಲ ವರ್ಣದ ಕಿಟ್ಟು !
ಬಂದ ಬಂದನವ ಗೋವಿಂದಾ.

ಬೃಂದಾವನದಲಿ ನಮ್ಮ ಮುಕುಂದ !
ಬೆಣ್ಣೆಯ ಕಳ್ಳನಿಗಿಂತಲು ಚಂದ !
ನಮ್ಮೀ ಹಳ್ಳಿಗೆ ಗೋಪಿಯ ಕಂದ !
ಬಂದ ಬಂದನವ ಗೋವಿಂದಾ.

---

# ಯಮುನೆ

ಯಮುನೆಯ ಮೈಬಣ್ಣವು ಕರಿದಾದರು,
    ಕಣ್ಣಲಿ ಕಾಂತಿಯು ಮೂಡಿಪುದು;
ಚಂದಿರನೊಲವಿನ ನೈದಿಲೆಯಂದದಿ
    ಮೊಗದಲಿ ಶಾಂತಿಯು ಕೂಡಿಪುದು.

ನೀರನು ತಾರಲು ಬಾವಿಗೆ ಹೋಗಲು
    ಯಮುನೆಯ ಕಂಡೆನು ತೋಷದಲಿ;
ಬಾವಿಯ ದಾರಿಯಲಿರುವಾಲದ ಮರ—
    ದಾಚೆಗೆ ನಿಂತೆನು ಪಾಶದಲಿ.

ಯಮುನೆಯ ಮೈಬಣ್ಣವು ಕರಿದಾದರು,
    ಹೃದಯದಿ ಮೋಹವು ತೇಲುವದು;
ರಮಣಿಯ ಮೋರೆಯು ಚಂದ್ರನ ತೇಜಕೆ
    ಎಲ್ಲಾ ತರದಲಿ ಹೋಲುವದು !

ಬೆಳಗಿನ ಜಾವದಿ ಆಕಳ ಹಾಲನು
    ಹಿಂಡುತಲಿರುವಳು ನನ್ನರಸಿ,
ಆಗವಳಾ ನಗು ಹಾಲಿನಗಿಂತಲು
    ಬಿಳುಪಾಗೆಸೆವುದು ಹೊರಸೂಸಿ !

ಮಳೆಗಾಲಲಿ ನೀರ್ ಸುರಿಸುವ ಮೋಡವು
    ಯಮುನೆಯ ಮೊಗಕದು ಹೋಲುವುದು;
ಚಳಿಗಾಲದ ಬಿಳಿ ಮೋಡವು ಸುಮ್ಮನೆ,
    ನೀರಿಲ್ಲದೆ ಬರಿ ತೇಲುವುದು !

## ಯಮುನೆ

ಯಮುನೆಯ ಮೈಬಣ್ಣವು ಕರಿದಾದರು,
ಹೃದಯದ ಪ್ರೇಮವು ಹೊಳೆಯುವದು.
ಹೊರಗಿನ ಬೆಡಗಿಗೆ ಮರುಳಾಗುವ ಮನ
ಚಂಚಲ ವೃತ್ತಿಯು ತಳೆಯುವದು.

ಯಮುನೆಯ ಮೈಬಣ್ಣವು ಕರಿದಾದರು,
ಕಣ್ಣಲಿ ಕಾಂತಿಯು ಮೂಡಿಹುದು;
ಚಂದಿರನೊಲವಿನ ನೈದಿಲೆಯಂದದಿ
ಮೊಗದಲಿ ಶಾಂತಿಯು ಕೂಡಿಹುದು.

---

# ತರುಣರ ದಸರೆ

ಹೆಜ್ಜೆಯ ಹಾಕುತ ಬನ್ನಿರಿ ಮುಂದೆ
ಹೂಡಲು ದಸರೆಯ ಹಬ್ಬವನು;
ಉತ್ಸಾಹದ ಕಿರುಗೆಜ್ಜೆಯ ಕಟ್ಟಿ
ಹಾಡಿರಿ ನಾಡಿನ ಕಬ್ಬವನು.
ಹಬ್ಬದೊಳೇ ಹಿರಿ ದಸರೆಯ ಹಬ್ಬ,
ಕಬ್ಬದೊಳೇ ಸಿರಿ ರನ್ನನ ಕಬ್ಬ,
ಪದದೊಳಗೆಲ್ಲಾ ದಾಸರ ಹಾಡು,
ಧರೆಯೊಳು ನಮದೇ ಕನ್ನಡ ನಾಡು !
ನಾಡಿನ ಹಾಡನು ಹಾಡುತ ಬನ್ನಿ
ದಸರೆಯ ಸಡಗರ ನೋಡಲು ತನ್ನಿ.

ಮೋಡಗಳೆಲ್ಲವು ಸರಿದವು ಹಿಂದೆ,
ಆಗಸವೂ ತಿಳಿ, ಬಿಳುಪಾಯ್ತು;
ಚಳಿಗಾಳಿಂಬುವ ಸಗ್ಗದ ಅಗಸನು
ಗಗನವ ತೊಳೆದನೆ? ನೆನಪಾಯ್ತು.
ಬಿಸಿಲೇ ಬಾರದ ಮಳೆಗಾಲ
ಹಿಂದಕೆ ಸರಿಯಿತು ಆ ಕಾಲ;
ಬಂದಿದೆ ಬೆಳಕಿನ ಚಳಿಗಾಲ
ಅರಿವನು ಬೀರುವ ನವಕಾಲ.
'ಮುಗಿಲಿನ ಮಳೆ ಮುಗಿಯಿತು' ಅನ್ನಿ,
ನಗುಮಳೆಯನು ಸುರಿವುತ ಬನ್ನಿ.

ಸೀಮೋಲ್ಲಂಘನ ಮಾಡಿರಿ ಇಂದೆ
ಭೀತಿಯ ಸೀಮೆಯ ದಾಟುತಲಿ;

ಧೈರ್ಯಧ್ವಜವನು ಮೆರಸುವ ಮುಂದ
ನಡೆಯಿರಿ ನೀತಿಯ ನಾಡಿನಲಿ.
ಧರ್ಮದ ಗಡಿಯನು ದಾಟಲು ಬೇಡಿ;
ಕರ್ಮದ ಬೆವರಲಿ ಸ್ನಾನವ ಮಾಡಿ,
ಮರ್ಮವ ತಿಳಿದೆಲ್ಲರು ಹಾರಾಡಿ,
ಚರ್ಮದ ದೇಹದ ಸಾರ್ಥಕ ಮಾಡಿ;
'ಬನ್ನಿಯ ಗಿಡ ಬಂದಿತು' ಅನ್ನಿ:
ಚಿಣ್ಣರೆ, ನೀವೆಲ್ಲರು ತನ್ನಿ.
'ಹಿಂದಿನ ಕಾಲವು ಹಿಂದಕೆ' ಅನ್ನಿ,
ಮುಂದಿನ ಕಾಲವು ನಮ್ಮುಂದೆ;
ನಾಡಿನ ಯುವಕರೆ ಮುಂದಕೆ ಬನ್ನಿ,
ಮುದುಕರು ನಿಲ್ಲಲಿ ಹಿಂದಿಂದೆ.
ಹೊಸ ಹೊಸ ಮತಗಳು ಬಗೆಬಗೆ ಹುರುಪಿನ
ಚಿನ್ನ ಚಟಾಕಿಯ ಹಾರಿಸುವಾ;
ಕೆಂಪಿನ ವರ್ಣದ, ಕೆಚ್ಚೆದೆ ಬಣ್ಣದ,
ಕಿಡಿಗಳನವರಿಗೆ ತೋರಿಸುವಾ.
ಮುದುಕರು ನಿಲ್ಲಲಿ ತುಸು ಹಿಂದೆ
ಹುಡುಗರ ಸಾಹಸವೇ ಇಂದೆ.
ಮುದುಕರು ಪಾಪಾ! ಕಂಗಳು ಮಂದ,
ಮುಂದಿನ ನೋಟವ ನೋಡಲು ಅಂಧ;
ಹೊಸ ಹೊಸ ರೀತಿಯ ದೂರುವರು
ಹಳೆಯ ಪುರಾಣವ ಸಾರುವರು!
ಅಂಧ ಭಕ್ತಿಗೇ ಉರಿಯನು ಒಡ್ಡಿ
ಎಲ್ಲರು ನಿಲ್ಲಿರಿ ಗೋಲಾಗಿ,
ಚಂದದಿಂದ ಚಪ್ಪಾಳೆಯ ತಟ್ಟುತ
ತಿರುಗಿರಿ ಸುತ್ತಲು ಸಾಲಾಗಿ.

ದೊಡ್ಡ ಮನಸ್ಸಿನ ಕುದುರೆಯ ಹತ್ತಿ
ಕೈಯಲಿ ಹಿಡಿಯಿರಿ ಧೈರ್ಯದ ಕತ್ತಿ;
ವಿಶ್ವಧರ್ಮದಾ ರುಮಾಲು ಸುತ್ತಿ
ಆತ್ಮ ಸಂಯಮನ ಲಗಾಮು ಒತ್ತಿ,
ದುಗುಡವ ಬಗ್ಗಿಸಿ ಹಿರಿ ಹಿರಿ ಹಿಗ್ಗಿ
ಎಲ್ಲ ಜಾತಿಗಳ ಗುಂಪನು ನುಗ್ಗಿ,
ಭೇಧಪನೊಡೆಯಿರಿ ತಲೆಯನು ಬಗ್ಗಿ;
ಆಗ ನಲಿಯುವುದು ಸಂತಸ ಸುಗ್ಗಿ
ಭಾರತ ಭೂಮಿಯ ಅಬಲತೆ ಕುಗ್ಗಿ;
ಅಂದು ಮೂಡುವನು ದಸರೆಯ ಅರುಣ,
ಅಜ್ಞಾನದ ಕತ್ತಲೆಗೇ ಮರಣ.
ಮಾನವ ಧರ್ಮದ ದಸರೆಯ ಮಾಡಿ
ಕನ್ನಡ ನಾಡಿನ ಹಾಡನು ಹಾಡಿ.

ನವೀನ ಆಸೆಯ ಹೊಸ ಚಿಗರುಗಳೇ
    ನಮ್ಮೀ ಕುದುರೆಗೆ ಆಹಾರ;
ನಾವು ಹೊರಡುವುದು ವಿಜಯಾದಶಮಿ,
    ಅಂದಿನ ದಿನವೇ ರವಿವಾರ.
ಸೀಮೋಲ್ಲಂಘನ ಮಾಡಿರಿ ಬನ್ನಿ,
ಸುಗುಣಗಳೆಂಬಾಯುಧಗಳ ತನ್ನಿ,
ಬನ್ನಿಯ ಗಿಡದಡಿ ಸೇರಲು ಬನ್ನಿ,
ಕುಣಿಯುತ ಬನ್ನಿರಿ, ಸ್ವರ್ಣವ ತನ್ನಿ.
ಒಂಟಿಯ ಮೇಲಿನ ಯಾರೋ ಜಾಣ
ಒಡಕು ನಗಾರಿಯ ಬಾರಿಸೆ, ಅವನ
ರುಂಡವ ಬೀಳಿಸಿ, ಹೋಗಲಿ ಪ್ರಾಣ:
ಮುಂದೆ ಸಾಗಲ್ಕೈ ಶೂರ ಗಣ.

**ತರುಣರ ದಸರೆ**

ರನ್ನನ ಕವನದ ಕೊಂಬನು ಊದಿ
ದೇಶದೊಳೆಲ್ಲಾ ಶೌರ್ಯವ ಸೇದಿ;
ಪಂಪನ ಹೆಸರನು ಸೊಂಟಕೆ ಸುತ್ತಿ
ರನ್ನನ ಭೀಮನ ಗದೆಯನು ಎತ್ತಿ;
ಹುಕ್ಕನ ಬುಕ್ಕನ ಶಸ್ತ್ರವ ಹೂಡಿ
ವಿದ್ಯಾರಣ್ಯರ ಚರಿತವ ಹಾಡಿ;
ದಸರೆಯ ಹಬ್ಬವ ಹಬ್ಬಿಸಿರಿ,
ಕನ್ನಡ ನಾಡನು ಹಿಗ್ಗಿಸಿರಿ.

ಬನ್ನಿಯ ಗಿಡದಡಿ ಬೇಗನೆ ಸೇರಿ,
ಮುಗಿಲಿಗೆ ಮುಟ್ಟಿದ ವೃಕ್ಷವನೇರಿ,
ಸುರಲೋಕದ ಎಲೆಗಳನೇ ಕುಯ್ದು
ತನ್ನಿರಿ ಭೂಮಿಗೆ ಬನ್ನಿಯ ಆಯ್ದು;
ಅಂದು ಅಡಗುವುದು ಕುಂದು
ಭೂಮಿಯ ದುಃಖವು ಬೆಂದು.
‘ಪೂರ್ವದು ಬೇಕೈ ಪೂರ್ವದು’ ಎಂದು
ಏಕೆ ಬೊಗಳುವಿರಿ ಸುಮ್ಮಗೆ ನಿಂದು?
ಹಳಬರ ಹೆಸರದು ಸ್ಫೂರ್ತಿಗೆ ಸಾಕು
ಹೊಸ ಕಾಲಕೆ ಹೊಸ ಸಿಂಗರ ಬೇಕು;
ಹಿಂದಿನ ವೈಭವ ಮುಂದಕೆ ನೂಡಿ,
ಸುಮ್ಮನೆ ಬೆಚ್ಚಗೆ ಕುಳ್ಳಿರಬೇಡಿ.
ದಸರೆಯ ಹೊಸ ಪರಿ ಹೂಡಲು ಬೇಕು,
ಹಿಂದಿನ ಕಾಲದ ರೂಢಿಯು ಸಾಕು.
ಹಿರಿಯರದೆಲ್ಲವು ಬಲು ಚೆನ್ನ;
ಆದರೆ ಏನೈ? ಆ ಚಿನ್ನ
ಅವರೊಂದಿಗೆ ಕೂಡಿದೆ ಮಣ್ಣ,

ಇಂದೆಗೆ ಇಹುದೇ ಹೇಳಣ್ಣಾ ?
ಹಿಂದಿನ ಹಿರಿಯರು ಎರಡಡಿಯ
ನಡೆದುದರಿಂದಲೆ ಈ ಗಡಿಯ
ಮುಟ್ಟಿದರಲ್ಲವೆ ? ನಾವೀಗ
ಮುಂದಡಿಯಿಡುವುದು ಬಲು ಬೇಗ.
    ಅಂದು ಬೆಳಗುವುದು ನವರಾತ್ರಿ,
    ಬೆಳಕಿಂ ಹೊಳೆವುದು ಈ ಧಾತ್ರಿ.
ಅಂದಿನ ದಿವಸವು ನಿಜ ದಸರೆ,
ಇಂದಿನ ದಸರೆಯು ಬರಿ ಹೆಸರೆ !

ಪಕ್ಕದೊಳೆರಡೂ ರೆಕ್ಕೆಯ ಕಟ್ಟಿ,
ಹಕ್ಕಿಯ ತೆರದಲಿ ಮುಗಿಲನೆ ಮುಟ್ಟಿ,
ನಭದಲಿ ನಂದಾದೀಪವ ಕಚ್ಚಿ,
ದಸರೆಯ ಹಬ್ಬದ ಜ್ಯೋತಿಯ ಹಚ್ಚಿ;
ಕೊನೆಯಲಿ ಗಗನದ ತುದಿವರೆಗೇರಿ,
ತಾರಾಗಣಗಳ ಮೇಲಕೆ ಹಾರಿ,
ಯಾರೂ ಕಾಣದ ಲೋಕವ ಸೇರಿ,
ವಿಶ್ವಾನಂದ ಸುಗಂಧವ ಬೀರಿ;
    ಸೀಮೋಲ್ಲಂಘನ ತೀರಿತು ಅಂದು
    ವಿಶ್ವಪ್ರಪಂಚದ ತುದಿಯೇ ಬಂದು !
ಅಂದಿನ ದಿನವೇ ನಿಜ ದಸರೆ,
ಇಂದಿನ ದಸರೆಯು ಬರಿ ಹೆಸರೆ!

---

# ಬಡತನ

ಬಡತನದ ಬೇಗೆಯಲಿ ಬೆಂದ ಭಿಕ್ಷುಕನೊಬ್ಬ
ಮಸಣದಲಿ ಮಲಗಿದ್ದ ಹೆಣಕೆ ಅಂದ:—
"ಬಡತನದ ಭಾರವನು ಸ್ವಲ್ಪ ಹಿಡಿ, ಎದ್ದೇಳು,
ಬದುಕಿಸೆನ್ನನು ತಲೆಯ ಭಾರದಿಂದ;

ಇತ್ತೀಚೆ ಬಾಳುವೆಗೆ ಮತ್ತಿಷ್ಟು ಬೇಸತ್ತು,
ನಿನ್ನ ಬಗೆ ನನಗಿಂತಲೂ ಮಿಗಿಲು ಎಂದು,
ನಿನ್ನೆಡೆಗೆ ಬಂದಿಹೆನು ತಾಪ ಕಳೆಯಲಿಕೆಂದು
ನಿನ್ನ ಶಾಂತಿಯು ನಾನು ಪಡೆಯಲೆಂದು."

ಬಡತನದ ಬಾಳ್ವೆಗಿಂತಲು ಮರಣ ಲೇಸೆಂದು
ಒಪ್ಪಿಕೊಳ್ಳುವ ತೆರದಿ ಬಿದ್ದ ಹೆಣವು
ಮರುಮಾತನಾಡದೆಯೆ ಮೌನದಲಿ ಮಲಗಿತ್ತು !
ಇಂತಿಹುದು ಬಡತನದ ಕೆಟ್ಟ ಋಣವು !

———

# ಪಿರಿ ಪಿರಿ ಮಳೆಯು

ಪಿರಿ ಪಿರಿ ಮಳೆಯು,
ಹರಿಯಿತು ಹೊಳೆಯು,
ತೊಳೆಯಲು ಇಳೆಯೇ ಹಸನಾಯ್ತು;
ಹರುಷದ ಬೆಳೆಯು,
ಎಲ್ಲಿಡೆ ಕಳೆಯು,
ಭೂಮಿಯು ತಲವೇ ಬೆಸನಾಯ್ತು !

ತಿರೆಯಿಂತಿರಲೂ,
ಜೀವನವೊಂದಿಡೆ
ತಲ್ಲಣಗೊಳುತಿದೆ ! ಏನೆಂಬೆ ?
ಬಡವನ ಗುಡಿಸಲು
ಪಟಪಟ ಸೋರಲು,
ಮನೆಯಲಿ ಕೆಸರೇ ಕೆಸರೆಂದೆ !

———

# ವಾರದ ಪದ

ಸೋಮವಾರದ ಸಂತೆ
ನಮಗೆ ಬೇಕಾದಂತೆ:
ಮಂಗಳದ ಸಿರಿ ಮುತ್ತು
ಮಾರಲಿಕೆ ಬಂದಿತ್ತು.
ಬುಧವಾರ ಬಂದಾಗ
ಬುದ್ಧಿ ಕೆಟ್ಟಿತು ಆಗ;
ಗುರವಾರ ಗುರುಸಿದ್ಧ
ಬುದ್ಧಿ ಕಲಿಸಲು ಎದ್ದ;
ಶುಕ್ರವಾರದ ಸುದ್ದಿ-
ಇಲ್ಲ ತಲೆಯಲಿ ಶುದ್ಧಿ!
ಶನಿವಾರ ಶನಿಭೂತ
ಮನೆಯಲ್ಲಿಯೇ ಕೂತ!
ರವಿವಾರ ವಿಶ್ರಾಂತಿ ?
ಹೊಟ್ಟೆಯೊಳಗಿನ ಕ್ರಾಂತಿ!
ಇಂತು ಮುಗಿಯಿತು ವಾರ!
ಮಾನವನ ಉದ್ಧಾರ!

---

# ಸ್ವರ್ಗ ಮತ್ತು ಭೂಮಿ

ಸಗ್ಗವನೇರಲು ಬಯಸುವದೇತಕೆ ?
ಅಂದದ ಚಂದದ ಭೂಮಿಗೆ ಬಂದು
ನೆಲದಲಿ ಬೆಳೆದೂ ಹೊಲದಲಿ ಸುಳಿದೂ
ತೋಟದ ತಿನಿವಣ್ಣುಗಳನು ತಿಂದು

ಹಕ್ಕಿಗಳುಲುಹಿನ ಸವಿಯನು ಕೇಳಲು
ಕಿವಿಗಳಿಗದುವೇ ಕಿನ್ನರಗಾನ;
ತಿರೆಯಲಿ ಹರಿಯುವ ಝರಿಯನು ಕುಡಿಯಲು
ನಾಲಿಗೆಗದುವೇ ಅಮೃತಪಾನ

ಕುರಿಗಳ ಕಾಯುವ ಕುರುಬನ ಕಾಣಲು
ಕಂಗಳಿಗವನೇ ಗೋಪಿಯ ಕಂದ;
ಮಕ್ಕಳ ಮಾತಿನ ಮಮತೆಯು ಮೂಡಲು
ಮನಸಿಗೆ ಸ್ವರ್ಗದ ಹಿರಿದಾನಂದ

ಮರದಡಿ ಹಸುರಿನ ಹುಲ್ಲಲಿ ಮಲಗಲು
ಸಗ್ಗಿಗರೊಡೆಯನು ಪವಡಿಪ ಸೆಜ್ಜೆ;
ನವಿಲಿನ ನೃತ್ಯದ ಚಂದವ ನೋಡಲು
ಅದುವೇ ರಂಭೆಯ ಕುಣಿತದ·ಹೆಜ್ಜೆ

ನೀಲಿಯ ನಭದಲಿ ಹೊಳೆಯುವ ತಾರೆಯು
ನಮ್ಮೀ ಲೋಕದ ಬಾಡದ ಹೂವು;
ಮಳೆಗಾಲದಿ ಮೂಡುವ ಕಾಮನಬಿಲ್ಲೇ
ಮಾನವ ಲೋಕದ ಕಾಮನಬಿಲ್ಲು

ಸಗ್ಗವನೇರಲು ಬಯಸುವದೇತಕೆ
ಅಂದದ ಚಂದದ ಭೂಮಿಗೆ ಬಂದು ?
ನೆಲದಲಿ ಬೆಳೆದೂ ಹೊಲದಲಿ ಸುಳಿದೂ
ತೋಟದ ತಿನಿವಣ್ಣುಗಳನೆ ತಿಂದು

## ಸೂಳೆ

ತುಟಿಯಲಿ ಬಣ್ಣ,
ಕಾಲಲಿ ಗೆಜ್ಜೆ;
ಹಿಂದಕೆ ಮುಂದಕೆ
ಸುಳಿವುದು ಹೆಜ್ಜೆ

ಮಿರುಗುವ ಸೀರೆ,
ಸೆರಗದು ಓರೆ,
ಕಾಮವಾಸನೆಗೆ
ಬರುವದು ಧಾರೆ

ಮೋರೆಯ ಮೇಲೆ
ನಸು ನಸು ಹಾಸಾ.
ನಿಮಿಷಕೆ ನಿಮಿಷಕೆ
ವಿಧ ವಿಧ ವೇಷ

ಬಂಧುರ ಗಣಿಕಾ;
ಸುಂದರ ಕುಣಿತಾ;
ತುಸು ತುಸು ಮಣಿದೂ
ಮನದಲಿ ಗಣಿತಾ

ಹಾರಿತು ಹುಬ್ಬು,
ಕೋರಿತು ಕಣ್ಣು,
ಕಾಮದೇವನಿಗೆ
ಹರಕೆಯ ಹಣ್ಣು

ಮಲ್ಲಿಗೆ ಮುಡಿದು,
ನಿರಿಯನು ಹಿಡಿದು
ಮುರುಳುಗೊಳಿಸುವಳ
ಮೆಲ್ಲಗೆ ನಡೆದು

ತೆಳು ತೆಳು ಕುಪ್ಪಸ
ಅಭ್ರಕದಂತೆ;
ಒಳದೋರುವ ಮೈ
ಕಾಮನ ಸಂತೆ

ಕಿವಿಯಲಿ ವಾಲಿ,
ಲಕ ಲಕ ಚಿನ್ನಾ;
ಕಾಲ ಪೈಜಣವು
ಝುಣಝುಣ ಚೆನ್ನಾ

ಗೆಜ್ಜೆಯ ಪಟ್ಟೀ
ಸೊಂಟಕೆ ಬಿಗಿದು.
ತೇಲಿ ಬಳುಕುವಳು
ಮೇಲಕೆ ಜಿಗಿದು

ಅಲಗಲು ಚೆಂದಾ
ಮೂಗಿನ ನತ್ತು;
ದಂತದ ಸಾಲೂ
ಕಟ್ಟಿದ ಮುತ್ತು

ಕುಂಕುಮ ತಿಲಕಾ
ಅತಿಶಯ ಸಣ್ಣಾ;
ಕೈಯಿಗೆ ಮೈಯಿಗೆ
ಅರಿಸಿಣ ಬಣ್ಣಾ

## ಸೂಳೆ

ಕೆನ್ನೆಗಳೆರಡೂ
ನಸು ನಸುಗೆಂಪು;
ಜೋತಾಡುವ ಜಡೆ-
ಗೂದಲು ಸೊಂಪು

ಗಂಧ ಸುಗಂಧವ
ಅಂಗಕೆ ಬೀರಿ,
ಮನ ಮೋಹಿಸುವಳು
ಬಿಂಕದ ನಾರಿ

ಸಡಗರದಿಂದಲಿ
ಬೆಡಗಿನ ಸೂಳೆ
ರಂಜಿಸಿ ನಟಿಸಲು,
ಕಾಮನ ಲೀಲೆ

ಮಂಚದ ಮೇಲೆ
ರಮಿಸಲು ಹೆಣ್ಣು,
ರಮಣಿಯ ಮೇಲೆ
ರಸಿಕನ ಕಣ್ಣು

\+ + + + +

ಸುಳಿದವರಾರೈ ?
ನಲಿದವರಾರೈ ?
ಮಾಳಿಗೆಯಿಂದಲಿ
ಇಳಿದವರಾರೈ ?

ಪ್ರಣಯಿಗಳಿಂದಾ
ತುಂಬಿದ ಕೋಣೆ;
'ಗುರುತಿಸು' ಅಂದರೆ
ಯಾರನು ಕಾಣೆ!

ಜಾರಿದರಾರ್ರೈ
ಸುಖವನು ಹೀರೆ,
ನಾಚಿಕೆಯಿಂದಲಿ
ಅಡಗಿಸಿ ಮೋರೆ ?

ಸೂಳೆಯ ಹಾಸಾ
ರತಿಯ ವಿಲಾಸಾ
ಹೊಸ ಹೊಸ ಕಾಮಿಂಯು
ನವ ಮಧುಮಾಸಾ.

ಹಿಂದಿನ ಗಂಡನು
ಇಂದಿಗೆ ಇಲ್ಲಾ !
ಮುಂದಿನ ಮಿಂಡನು
ಯಾರದು ಬಲ್ಲಾ ?

ಬಂದವರಾರ್ರೈ ? —
ಪರಿಚಯವಿಲ್ಲಾ.
ಆದರು ಕರೆವಳು
'ನಲ್ಲಾ ! ನಲ್ಲಾ' !

ಸೂಳೆಯ ಮನೆಯಲಿ
ಕಾಣದು ಭೇದಾ !
ಧರ್ಮದ ಹುಚ್ಚಾ
ಜಾತಿಯ ವಾದಾ !

ಯೌವನದಲಿ ಸಂ —
ಭೋಗದ ಭುಕ್ತಿ;
ಮುಪ್ಪಿನ ದಿನದೊಳು
ದೇವರ ಭಕ್ತಿ !

## ಸೂಳೆ

ಮಾನವ ಪ್ರಾಣಿಯ
ನಾನಾ ವೇಷಾ
ನೋಡುವ ಪುಣ್ಯವು
ಸೂಳೆಗೆ ! ಈಶಾ !

ಕಾಮವಿಲಾಸವು
ನಾಟಕ ರಂಗಾ;
ಆಟವು ಮುಗಿಯಲು
ಮಿಥ್ಯಾಭಂಗಾ !

ನಿನ್ನದೆ ಆಟಾ !
ನಿನ್ನದೆ ನೋಟಾ !!
ವಿಶ್ವರಂಗದಲಿ
ಬಗೆ ಬಗೆ ಮಾಟಾ !!!

---

# ದೇವನ ಅವತಾರ

ಕಿರಣಗಳೆನಿತೋ ಮಿರುಗುತಲಿದ್ದರು
ತರಣಿಯು ಒಬ್ಬನೆ, ಸೋದರನೆ;
ಊರುಗಳೆನಿತೋ ತಿರೆಯೊಳಗಿದ್ದರು
ಧರೆಯೊಂದಲ್ಲವೆ, ಮಾನವನೆ ?

ರಾಗಗಳೆನಿತೋ ಮುಗಿಲೊಳಗಿದ್ದರು
ಆಗಸವೊಂದಲ್ಲವೆ, ಮಗನೆ ?
ಕಡಲುಗಳೆನಿತೋ ಪೊಡವಿಯೊಳಿದ್ದರು
ಜಲವೊಂದಲ್ಲವೆ, ಸೋದರನೆ ?

ಜೀವಿಗಳೆನಿತೋ ಬುವಿಯೊಳಗಿದ್ದರು
ಜೀವವು ಒಂದಲ್ಲವೆ, ಮಗನೆ ?
ಎಲ್ಲಾ ಜೀವಿಗಳೊಂದೇ ಜಗದಲಿ
ದೇವನ ಅವತಾರವು, ಮಗನೆ !

---

# ಉಗಿಬಂಡಿ

ಲಗುಲಗು ಬುಗುಬುಗು ಉಗಿಬಂಡಿ,
ಯಂತ್ರ ಯುಗಾದಿಯ ಚಾಮುಂಡಿ

೧

ಎತ್ತುಗಳಿಲ್ಲದೆ ಹೋಗುವ ಬಂಡಿ;
ಕುದಿಯುವ ನೀರಿನ ಕಬ್ಬಿಣ ಹಂಡಿ;
ಬೆಂಕಿಯ ಕಿಡಿಗಳನುಗುಳುವ ಚಂಡಿ.
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೨

ಇಂದ್ರನ ತೇಜಿಗೆ ಸೋಲದ ಗಾಡಿ;
ಭೂಮಿಗೆ ಬಿಟ್ಟವರಾರಿದ ನೋಡಿ,
ಮಾಡಿದರೇನೋ ಮಂತ್ರದ ಮೋಡಿ?
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೩

ಮಸೀ ಕೆಂಡಗಳ ಸಂಗದ ಸುಟ್ಟು,
ಒಳಗೆ ಹೊಟ್ಟೆಯಲಿ ವೇಗದ ಹುಟ್ಟು,
ಇದುವೇ ಶಾಸ್ತ್ರಪುರಾಣದ ಗುಟ್ಟು
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೪

ಮೊರೆಯದಿದ್ದರೂ ವೈದಿಕ ಮಂತ್ರ,
ಕಲಿಯುಗದೊಳಗಿದು ನಡೆವುದು ಯಂತ್ರ !
ಭೌತಿಕಶಾಸ್ತ್ರ–ಪಿಶಾಚಿಯ ತಂತ್ರ !
ಲಗುಲಗು ಬುಗುಬುಗು ಉಗಿಬಂಡಿ,
ಯಂತ್ರಯುಗಾದಿಯ ಚಾಮುಂಡಿ

೫

ಲೋಹಮಾರ್ಗವೇ ಸ್ವರ್ಗದ ದಾರಿ !
ದಾರಿ ದಾಟುವವನುರುಳಿಸಿ, ಚೀರಿ,
ಜೀವ ನುಂಗುವಳು ಜಂಜಡ ಮಾರಿ !
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ.

೬

ವರ್ಗಭೇದ ನಿನ್ನೊಳಗಿನ ಕುತ್ತ;
ಮೊದಲ ವರ್ಗ— ಸುಖಶಾಂತಿಯ ಚಿತ್ತ,
ಕೊನೆಯ ವರ್ಗ- ತಲೆಗೇರಿತು ಪಿತ್ತ;
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೭

ಹಿಂದಕೆ ಮುಂದಕೆ ಸಾವಿರ ಚಕ್ರ;
ಡೊಂಕು ದಾರಿಯಲಿ ಅಂಗವು ವಕ್ರ;
ಬಲಭೀಮನಿಗೂ ಹೋಲದ ಗಾತ್ರ!
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೮

ಮೋರೆಯಿಂದ ಮೇಲೇರುವ ಧೂಮ,
ವಾಯುದೇವನಿಗೆ ಹರಕೆಯ ಹೋಮ ?
ಹೋಮದಿಂದ ಕಪ್ಪಾಯಿತು ವ್ಯೋಮ
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೯

ತುಳಿದು ತುಳಿದು ನಿಜ ಒಂದೇ ದಾರಿ,
ಅಡ್ಡ ಹಾದಿಯನು ನೀ ಹಿಡಿಲಾರಿ;
ನಿನ್ನೀ ನಡತೆಯು ನಮಗುಪಕಾರಿ.
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೧೦

ಬೆನ್ನಿನ ಮೇಲದು ಜಂಗಮ ಜಾತ್ರೆ;
ಹಸಿವೆ ತಂಗಿಸುವ ಧಾನ್ಯದ ಪಾತ್ರೆ,
ಬರದೊಳು ನೀನೇ ಜೀವನ-ಮಾತ್ರೆ!
ಲಗುಲಗು ಬುಗುಬುಗು ಉಗಿಬಂಡಿ,
ಯಂತ್ರಯುಗಾದಿಯ ಚಾಮುಂಡಿ

೧೧

ಹಿಮಗಿರಿ-ತಲದಿಂ ಲಂಕೆಯ ವರೆಗೆ,
ಮೂಡಲ ದೆಸೆಯಿಂ ಪಡುವಲ ತೆರೆಗೆ,
ದಿನಸನ ಹಂಚುವ ಕೆಲಸವು ನಿನಗೆ
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ.

೧೨

ಲೋಹಮಾರ್ಗವೇ ದೇಶದ ನಾಡಿ,
ನಾಡಿಯೊಳಗೆ ನೀ ಚಲಿಸುವ ಗಾಡಿ;
ನಲಿವೆನು ತವ ನವ ಕವನವ ಹಾಡಿ
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

೧೨

ಯಂತ್ರಯುಗದ ಜನ-ಜೀವನ ಕ್ರಮವು
ಸ್ಥಿರವಾಗುಳಿಯಲು ನಿನ್ನದೆ ಶ್ರಮವು;
ತೀರಿತು ಹಿಂದಿನ ಕಾಲದ ಋಣವು!
ಲಗುಲಗು ಬುಗುಬುಗು ಉಗಿಬಂಡಿ
ಯಂತ್ರಯುಗಾದಿಯ ಚಾಮುಂಡಿ

---

## ರಾಜಾ ರಾಮಮೋಹನ ರಾಯನಿಗೆ—

ವಿಧವೆಯರ ಕಣ್ಣೀರ ತಡೆದ ಕರುಣಾಳು ನೀ,
ಮುಗುದೆಯರ ಮುಗುಳು ನಗೆ ನಿನ್ನ ಫಲವು;
'ಸತಿ'ಯೆಂಬ ಗತಿಗೆಟ್ಟ ಪಾಪಹತ್ಯವ ನಿಲಿಸೆ,
ಮೂಕ ಅಬಲೆಗೆ ಬಂತು ಧರ್ಮಬಲವು.

ಹಾಳು ರೂಡಿಯ ಧೂಳು ಭಾರತಕೆ ತಾಗಿರಲು,
ಕಸಗುಡಿಸಿ ಹಸನಾಗಿ ತೊಳೆದು ಬಿಟ್ಟೆ;
ಪುಣ್ಯ ಗಂಗಾನದಿಯ ಕೊಳಕು ನೀರಸು ಸೋಸಿ,
ಮೇಲೆ ನಂದಾದೀಪ ತೇಲಿಸಿಟ್ಟೆ,

ನಿನ್ನ ಕರ್ಮದ ನೆರಳಿನಲಿ ಧರ್ಮ ಚಿಗಿತೆದ್ದು,
ಹೂಬಿಡುತಲಿಹುದು ತಾ ಮಂದಾರವಾಗಿ;
ನಿನ್ನ ನಂದಾದೀಪ ಇಂದಿಗೂ ತೇಲುತಿದೆ
ಆಕಾಶದಲಿ ತಾನು ತಾರೆಯಾಗಿ.

---

# ಮಂಜು

ಮಂಜಿನ ಮುತ್ತು
ಮುಗಿಲಿಂ ಬಿತ್ತು
ಚುಕ್ಕಿಯ ಕಣ್ಣೀರು:
ಬಡವನು ಚೀರೆ
ಅತ್ತವು ತಾರೆ!
ಉದುರಿತು ತುಸು ನೀರು!

———

# ತಂಬೂರಿ ದಾಸ

ನನಗಿಂತಲು ಸುಖಿ ಯಾರಿಹನಯ್ಯಾ
ಭೂಮಂಡಲದೊಳಗೆ ?
ನನಗೆಂಬರು ಜನ 'ತಂಬೂರಿ ದಾಸಾ'
ಕನ್ನಡ ನಾಡೊಳಗೆ

ಕೈಯಲಿ ತಂಬೂರಿ, ಕೊರಳಲಿ ಮಂಜರಿ,
ಹೆಗಲಲಿ ಜೋಳಿಗೆಯು;
ಜೋಳದ ದವಸದಿ ಜೋಳಿಗೆ ತುಂಬಲು
ಬಾಯಲಿ ಹೋಳಿಗೆಯು

ಊರಿಂದೂರಿಗೆ ದೂರದ ಕೇರಿಗೆ
ಮಂಗಳ ಸಂಗೀತ;
ಉಡುಪಿಯ ಕೃಷ್ಣನ ಪುರಂದರ ವಿಠಲನ
ಭಕ್ತಿಯು ವೇದಾಂತ

ಕನ್ನಡ ದಾಸರ ಭಕ್ತಿರಸಾಮೃತ
ಸವಿಯುರಿ ಸವಿ ಜೇನ;
ತಂಬೂರಿ ತಾಳದ, ಅನುಭವದಾಳದ
ಪದದಲಿ ತಲ್ಲೀನ

ತಂತಿಯು ಸುತ್ತಲು ಜನರದು ಮುತ್ತಲು
ತಂಬೂರಿಗಾವೇಶ;
ಸಂತೆಯು ಪಂಯಲಿ ಸಂದಣಿ ಸೇರಲು
ನನಗೂ ಸಂತೋಷ

ತಂತಿಯು ಮಿಡಿಯಲು, ತಂಬುರಿ ನುಡಿಯಲು,
ಕುಣಿವುದು ಜನವೃಂದ;
ದಾಸರ ಪದಗಳ ಭಾವತರಂಗವು
ಭುವನಕೆ ಆನಂದ

ನಾನೂ ಕುಣಿವೆನು ಮನದಣಿ ಮಣಿವೆನು
ಚಿಣ್ಣರು ಕುಣಿದಂತೆ;
ಗೋಪಿಯ ಕಂದನ ಮುರಲಿಯ ನಾದಕೆ
ಗೋಗಳು ಕುಣಿವಂತೆ

ಕುಣಿಯುವದೊಂದೇ ಕುಣಿಸುವದೊಂದೇ
ಸಂಗೀತದ ಶಕ್ತಿ;
ಗಾನದ ಝರಿಯೊಳು ತಾನವು ಹರಿಯಲು,
ಧರೆಗಿಳಿವುದು ಮುಕ್ತಿ !

ಸ್ವರ್ಗವದೆಂಬರು ನರಕವದೆಂಬರು,
ಎರಡನು ನಾನರಿಯೆ !
ಸ್ವರ್ಗದೊಳಾಗಲಿ ನರಕದೊಳಾಗಲಿ
ಸಂಗೀತದ ಮರೆಯೆ

ತಂಬುರಿಯೊಂದೇ ದಾಸನ ಬದುಕು,
ತಿರುಪೆಯೆ ಸಂಸಾರ;
ಜನರದು ಹಿಗ್ಗಲು ನನಗದು ಹುಗ್ಗಿಯು,
ಹಸಿವೆಯ ಪರಿಹಾರ

———

# ಯುವಕನ ವನವಾಸ

ಯುವಕನಿಗೇತಕೆ ಬಾಳಿನ ಕಾಟ
ಅವನಿಗೆ ಬೇಕೈ ಬನದಾಟ!
ಮುದುಕನಿಗೇತಕೆ ವನಗಳ ನೋಟ
ಮುಪ್ಪಿಗೆ ಮಕ್ಕಳ ಮರಿಯಾಟಾ!
ಜೀವನಯಾತ್ರೆಯ ನಡು-ಹಗಲಲ್ಲಿ
ತರುಣನು ಸತಿ-ಸುತರನು ಕೂಡಿ
ಮಾಯಾಪಾಶದಿ ಸಿಲುಕುವದೇತಕೆ
ಮೋಹದ ಪಲ್ಲವಿಯನು ಹಾಡಿ?

ತರುಣನ ರಕ್ತವು ಬಿಸಿಯಾಗಿರುವುದು,
ಶಕ್ತಿಯು ಮೈಯೊಳಗಾಡುವುದು;
ಆವೇಶದ ಹಿರಿದಾಸೆಯ ಕಿರಣವು
ಮನಸಿನ ಮುಗಿಲಲಿ ಮೂಡುವುದು.
ತರುಣನು ಸೇರಲಿ ವನವಾಸವನು
ಧೈರ್ಯದೊಳೇರಲಿ ಹಿಮಗಿರಿಯನ್ನು
ಮುಟ್ಟಲಿ ಮುಗಿಲಿನ ಬೆಳ್ಳಿಯ ತುದಿಯು
ನೆಟ್ಟನೆ ತಟ್ಟಲಿ ಕೆಂಗಿಡಿಯೆದೆಯು!
ತರುಣನು ಮೋಡವ ಕುಡಿಯುತಲಿರಲಿ
ಬಾವಿಯ ನೀರದು ಮುದುಕನಿಗಿರಲಿ!
ನಡೆ ನಡೆ ತರುಣನೆ, ಮುಂದಕೆ ಸಾಗು
ಹಿರಿದಾಸೆಯ ನೀರಡಿಕೆಯ ನೀಗು!

ಯುವಕನು ಸೇರಲಿ ವನವಾಸವನು
ಹುಲಿಗಳ ಜೊತೆಯಲಿ ಬಾಳುವನವನು!

ಮುದುಕನಿಗೇತಕೆ ಹುಲಿಗಳ ಕತೆಯು
ಅವನಿಗೆ ಹೆಂಡತಿ-ಮಕ್ಕಳ ಜೊತೆಯು !

ಕಾನನ ಉದ್ಯಾನದ ಫಲ ಸಂಚಯ
ಯುವಕನ ಹಸಿವೆಗೆ ಆಹಾರ ;
ಮುದುಕನ ಪಾಲಿಗೆ ಹಬ್ಬದ ಹೋಳಿಗೆ,
ಮನೆಯಲಿ ಕೂತು ಫಲಾಹಾರ.

ಬನದಲಿ ಕೇಳುವ ಖಗಗಳ ಕವನವು
ಯುವಕನ ಕಿವಿಗದು ಸಂಗೀತ,
ಮಠದಲಿ ಕೀರ್ತನೆಕಾರರು ಗೊಜಗುವ
ಹರಟೆಯು ಮುದುಕನಿಗೇ ಗೀತ.

ಯುವಕನು ಸೇರಲಿ ವನವಾಸವನು,
ಮುದುಕನು ಕೋರಲಿ ಸಂಸಾರವನು;
ಯುವಕ ಯುವತಿಯರು ಬನದೊಳಗಿರಲಿ,
ಮುದುಕ ಮುದುಕಿಯರು ಮನೆಯೊಳಗಿರಲಿ.

ತರುಣನಿಗೇತಕೆ ಬಾಳಿನ ಕಾಟ
ಅವನಿಗೆ ಬೇಕೈ ಬನದಾಟ !
ಮುದುಕನಿಗೇತಕೆ ವನಗಳ ನೋಟ ?
ಮುಪ್ಪಿಗೆ ಮಕ್ಕಳ ಮರಿಯಾಟ !

---

# ವೀರ ಒಕ್ಕಲಿಗರು

[ ಬಾರ್ಡೋಲಿಯ ಸತ್ಯಾಗ್ರಹ ಸಮರದಲ್ಲಿ ಕಂದಾಯವನ್ನು ಕೊಡದೆ, ಬೆಳೆಯನ್ನು ಸುಟ್ಟು, ಬ್ರಿಟಿಶ್ ಗುಜರಾತವನ್ನು ಬಿಟ್ಟು, ಬಡೋದಾ ಸಂಸ್ಥಾನವನ್ನು ಸೇರಿದ ಬಾರ್ಡೋಲಿಯ ವೀರ ಒಕ್ಕಲಿಗರು ದಾರಿಯಲ್ಲಿ ಈ ಹಾಡನ್ನು ಹಾಡುತ್ತ ಹೋಗಿರಬಹುದೆಂದು ಊಹಿಸಿ ಈ ಕವನ ಬರೆಯಲಾಗಿದೆ. ಇದು ನಡೆದದ್ದು ೧೯೨೮ ರಲ್ಲಿ ]

ಹಾಳಾಗಲಿ ಮನೆ ಮಠ ಹೊಲವೆಲ್ಲಾ!
ಹಾಳಾಗಲಿ ಆ ಜೋಳವು ಬೆಲ್ಲ!
ದಾಸ್ಯದಿ ಬೆಳೆದಾ ಬೆಳೆ ನಮದಲ್ಲಾ!
ಸ್ವರಾಜ್ಯ ತಾಯೀ ಭಾರತ ಭೂ

ಉತ್ತಿ ಬಿತ್ತಿದಾ ಭತ್ತದ ಪೈರು,
ಸಾಕಿ ಸಲುಹಿದಾ ತಾಪಿಯ ನೀರು,
ಎಲ್ಲವು ಬರಿದೋ ಭಣ ಭಣ ಊರು!
ಸ್ವರಾಜ್ಯ ತಾಯೀ ಭಾರತ ಭೂ

ಗಾಂಧಿ ಮಹಾತ್ಮನ ಭಕ್ತರು ನಾವು
ಚದುರಿಸದೆಮ್ಮನು ಲಾಠಿಯ ನೋವು!
ನುಂಗದು ದಬ್ಬಾಳಿಕೆಯಾ ಹಾವು!
ಸ್ವರಾಜ್ಯ ತಾಯೀ ಭಾರತ ಭೂ

ಮೋಹ ಮಮತೆಗಳ ಮೂಲೆಗೆ ನೂಕಿ,
ಭತ್ತದ ಪೈರಿಗೆ ಬೆಂಕಿಯ ಹಾಕಿ,
ಥೈ ಥೈ ಕುಣಿವೆವು ಗೆಲವಿನ ಮಿಕ್ಕಿ!
ಸ್ವರಾಜ್ಯ ತಾಯೀ ಭಾರತ ಭೂ

ಬಂಧನದೊಳಗಿನ ಬಾಳುವೆಯಿಂದ
ಬೆಂದು ಹೋಗುವುದೆ ಪರಮಾನಂದ!
ಮಾತೃಸೇವೆಯೇ ಮಗನಿಗೆ ಚಂದ;
ಸ್ವರಾಜ್ಯ ತಾಯೀ ಭಾರತ ಭೂ

ತ್ಯಾಗದಲ್ಲಿಯೇ ಭೋಗವ ಕಂಡು,
ಸಂಕಟನಲ್ಲೇ ಸೌಖ್ಯವನುಂಡು,
ತೇಗಿ ತೇಗುತಲೆ ಸಾಗಿದೆವಿಂದು!
ಸ್ವರಾಜ್ಯ ತಾಯೀ ಭಾರತ ಭೂ

ಸತ್ಯವೆಂಬುದೇ ಕೈಯಾ ಕೋಲು,
ಲೋಕಸೇವೆಯೇ ತಲೆಯ ರುಮಾಲು,
ಜಪ ತಪ ಕರ್ಮವು ತಕಲಿಯ ನೂಲು!
ಸ್ವರಾಜ್ಯ ತಾಯೀ ಭಾರತ ಭೂ

ವೀರ ವಲ್ಲಭನ ಬಂಟರು ನಾವು!
ಉರುಳಿಸದೆಮ್ಮನು ಗುಂಡಿನ ನೋವು!
ನಾಡ ಭಕ್ತರಿಗೆ ಬೇವೇ ಮಾವು!
ಸ್ವರಾಜ್ಯ ತಾಯೀ ಭಾರತ ಭೂ

ಅವಮ್ಮಾ, ಅವಮ್ಮಾ, ಭಾರತರಮ್ಮಾ,
ಇಷ್ಟು ಬಂಧನವು ನಿನಗೇಕಮ್ಮಾ?
ನಿನಗರ್ಪಣವೀ ಪ್ರಾಣಗಳೆಮ್ಮಾ!
ಸ್ವರಾಜ್ಯ ತಾಯೀ ಭಾರತ ಭೂ

ಹೊಟ್ಟೆಯಲ್ಲಿ ಭೋ ಭಗಭಗ ಜ್ವಾಲೆ!
ಹಸಿವೆಯ ಬೆಂಕಿಯು ಕೆಳಗೂ ಮೇಲೆ!
ಪುತ್ರಯಜ್ಞದಲಿ ನರಬಲಿ ನಾಳೆ!
ಸ್ವರಾಜ್ಯ ತಾಯೀ ಭಾರತ ಭೂ

---

# ವೀರಗಲ್ಲು

ಬೀರ ದೇವರ ಕಲ್ಲು
ವೀರಸ್ವರ್ಗದ ಸೊಲ್ಲು;
ಪುಣ್ಯಕರ್ಮದ ಕುರುಹು,
ನಮ್ಮ ಧರ್ಮದ ಅರುಹು,
ಐತಿಹಾಸಿಕ ಕಂಬ,
ಗತ ವೈಭವದ ಬಿಂಬ;
ಪೂರ್ವಜರ ಕೈದೀಪ,
ನಮ್ಮ ಕೀರ್ತಿಯ ರೂಪ.

"ಕಲ್ಲು" ಎಂಬುದು ಹೆಸರು,
ಮಾತನಾಡುವ ಉಸುರು!
ಕೆತ್ತಿದಕ್ಷರ ಗೋಲು
ಮುತ್ತುಗಳಿಗೂ ಸೋಲು!
ಪಂಚವಾದ್ಯದ ಮೇಳ
ಡೋಲು, ಜಂಗಟೆ, ತಾಳ;
ವಾದ್ಯದೊಂದಿಗೆ ವೀರ
ಸ್ವರ್ಗವೇರುವ ಶೂರ;
ಏನು ಸುಂದರ ಚಿತ್ರ
ಕಲೆಯ ಬಂದುರ ಗಾತ್ರ!
ಶಿಲ್ಪಕಲೆ ಜೀವಂತ
ತಪ್ಪಶಿಲೆಯಲಿ ಗ್ರಂಥ!

ತುರಗವೇರಿದ ಸ್ವಾರ,
ಸಂಗ್ರಾಮ ಘನ ಘೋರ;
ರಣರಂಗದಲಿ ಗೆಲುವು
ಪ್ರಾಣಗಿಂತಲು ಚೆಲುವು!
ಸೂರ್ಯಚಂದ್ರರ ಚಿತ್ರ
ಕಲಿಗೆ ಮಾನದ ಪತ್ರ;
ವೀರಸ್ವರ್ಗದ ಸಾವೆ
ದೇವಾಂಗನೆಯ ಸೇವೆ.
ಮಂಗಳಾರತಿ ಕಲಿಗೆ
ಕ್ಷಾತ್ರ ತೇಜದ ಹುಲಿಗೆ;
ಹೆಮ್ಮೆ ಕನ್ನಡ ಕುಲಕೆ
ದಮ್ಮು ವೈರಿಯ ಬಲಕೆ;
ವೀರ್ಗಲ್ಲು ಅಡಿಗಡಿಗೆ
ಜಯವು ಕನ್ನಡ ಗುಡಿಗೆ.

---

# ಸ್ವರ್ಗ ಮತ್ತು ನರಕ

ಸ್ವರ್ಗವು ಬೇಕೋ? ನರಕವು ಬೇಕೋ?
ಯಾವುದು ಬೇಕಪ್ಪಾ?
ಸ್ವರ್ಗದ ಸಿದ್ಧೀ ನರಕದ ಸುದ್ದೀ
ಎರಡೂ ಸಾಕಪ್ಪಾ!

ನಾವೇನಯ್ಯಾ ಸಾದಾ ಮಂದಿ
ಕಲಿತದ್ದೇ ಅಷ್ಟು;
ಕಾರ್‌ವಾರ್‌ದಿಂದಾ ಮೈಸೂರ್ ವರೆಗೇ
ನಮ್ಮದು ವೈವಾಟು.

ಸ್ವರ್ಗದೊಳಯ್ಯಾ ಅಮೃತವೊಂದೇ
ಸೇವಿಸಬೇಕಂತೆ!
ಅಮೃತವನ್ನೇ ಭೋಜನವೆಂದು
ಭಾವಿಸಬೇಕಂತೆ!

ಸವಿಯಾದಮೃತ ಸವಿದೂ ಸವಿದೂ
ಬೇಸರವಿಲ್ಲೇನೋ?
ಸವಿಯೇ ತಿಂದರೆ ಮೈಯಿಗೆ ಕಜ್ಜಿ
ಆಗುವುದಿಲ್ಲೇನೋ?

ಉಳ್ಳಾಗಡ್ಡೀ ಜೋಳದ ಭಕ್ರೀ
ಕನ್ನಡಿಗರ ಸ್ವರ್ಗಾ!
ರಾಗಿಯ ಮುದ್ದೆಯೆ ಮೈಸೂರ್ ಗೌಡಗೆ
ಸುಖದಾಯಕ ಮಾರ್ಗಾ!

ಕುಚ್ಚಿಗೆ ಅಕ್ಕೀ ಮೀನಿನ ಪಳದೀ
ಕಾರ್‌ವಾರ್ ಜನಕೆಲ್ಲಾ;
ಈ ತರದೂಟಾ ಕಣ್ಣಿಗೆ ಕಾಣಾ,
ಸ್ವರ್ಗದ ಮೇಲಿಲ್ಲಾ !

ಸ್ವರ್ಗದೊಳಯ್ಯಾ ಹೂವಿನ ಹಾಸಿಗೆ,
ಕಂಬಳಿಯಿಲ್ಲಂತೆ !
ಇಂದ್ರನ ಸೂಳೆಗೆ ರಂಭೆಗೆ ಸ್ವರ್ಗಾ
ಉಂಬಳಿಯಾಯ್ತಂತೆ !

ನಮಗೇಕಯ್ಯಾ ರಂಡೆಯ ರಾಜ್ಯಾ ?
ಭಂಡರು ನಾವಲ್ಲಾ;
ಕೆಚ್ಚಿದೆ ಕನ್ನಡ ಗಂಡರು ನಾವು,
ಷಂಡರ ಮಾತಲ್ಲಾ.

ಎಂಥಾ ಸ್ವರ್ಗಾ ! ಎಂಥಾ ನರಕಾ !
ಸುಮ್ಮನೆ ತಲೆಬೇನೆ !
ಇಹ ಲೋಕದೊಳೇ ನಂಬಿಗೆಯಿದ್ದರೆ
ನರಕವ ನಾ ಕಾಣೆ.

———

# ಕೌದಿ *

ಮನದಲಿ ತುಂಬಿತು
ನವ ಸಂತೋಷ,
ಕವನವ ರಚಿಸಲು
ನನಗಾವೇಶ.
ಪಣಗಲು ಹಾಕಿದ
ಸಿನ್ನನು ನೋಡಿ
ಮೂಡಿತು ಪ್ರತಿಭೆಯು
ಗುಣುಗಣು ಹಾಡಿ.
ಹೊಳೆಹೊಳೆಯಾಗಿಹ
ಮೋಹದ ದಾಹ
ಹರಿಯಿತು, ಕವನದ
ಭಾವಪ್ರವಾಹ.
ಕಬ್ಬಿಗರೆಲ್ಲಾ
ಚಂದ್ರನ ಸುತ್ತು !
ಕೌದಿಯ ಚರಿತವು
ಮೂಲೆಗೆ ಬಿತ್ತು.
ನಾನೇ ನಿನ್ನಯ
ಹೊಸ ಕವಿವರನು
ಬಡವಿಯ ಭಾಗ್ಯದ
ಬಡ ಅನುಚರನು.

---

* ಕೌದಿಗೆ ಇಂಗ್ಲಿಷ್ ಭಾಷೆಯಲ್ಲಿ Quilt ಅನ್ನುತ್ತಾರೆ.

ಕೇಳೌ ಕೌದೀ,
ಬೆಚ್ಚಗೆ ತಾಯಿ,
ಚಳಿಯಲಿ ನೀನೇ
ಉತ್ತಮ ದಾಯಿ.
ಹೆಣ್ಣಿನ ಸೀರೆಯು
ಗಂಡಿನ ಧೋತ್ರ,
ಎರಡೂ ಕೂಡಲು
ಕೌದಿಯು ಗಾತ್ರ;
ಗಂಡೂ ಹೆಣ್ಣೂ
ಕೂಡಲು ಬಾಳು,
ಕೂಡದೆ ಹೋದರೆ
ಜಗವೇ ಹಾಳು!
ಚಿಂದಿಗಳೆಷ್ಟೋ
ಹೊಟ್ಟೆಯ ಒಳಗೆ,
ಒಕ್ಕಟ್ಟಿನ ಶ—
ಕ್ತಿಯು ಮೈಯೊಳಗೆ.

ನಿನ್ನಂಗಕೆ ಹಳೆ
ಬಗೆ ಬಗೆ ಬಣ್ಣ;
ಚಿಂದಿಗೆ ಚಿಂದಿಯು
ಜೋಡಿಸೆ, ನಿನ್ನಾ
ಆಕೃತಿಯಾಯಿತು,
ಸುಕೃತದ ಹುಟ್ಟು;
ಧರೆಯಲಿ ನೀ—
ನುಪಕಾರದ ಗುಟ್ಟು.

## ಕೌದಿ

ಅರ್ಭಕನನು ಸಲೆ
ಕೌದಿಯ ಮೇಲೆ
ಮಲಗಿಸೆ, ತಾಯಿಗೆ
ಕಂದನ ಲೀಲೆ.
ಮಲಮೂತ್ರದ ತಾ-
ಪತ್ರಯ ಸಹಿಸಿ,
ತಾಯಿಯಗಿಂತಲು
ನೀ ಪೋಲಿಸಿಸಿ,
ಜೀವನ ನಿಷ್ಠದು
ಪಾವನವಾಯ್ತು !
ಸೇವಾಧರ್ಮಕೆ
ಅರ್ಪಣವಾಯ್ತು.

ಪಿರಿಪಿರಿಯಾಗಿದೆ
ಕೌದಿಯ ದೇಹ,
ಜಿರಿಜಿರಿಯಾಗಿದೆ
ಮುದುಕಿಯ ಗೇಹ.
ಸಂದಿಗೆ ಸಂಡಿಗೆ
ನೂಲದು ಎದ್ದು,
ಹರಕ್ಕುರಕಾಗಿದೆ
ನೀರಲಿ ತಿದ್ದು;
ದಿನದಿನ ದಿಸವೂ
ಜಲದಲಿ ಬಿದ್ದು,
ಒಗೆಯುವ ನೆಪದಲಿ
ಸಾವಿರ ಗುದ್ದು !

ನಿನ್ನುಪಕಾರಕೆ
ಪ್ರತಿಫಲ ಹೀಗೆ !
ಮಾನವ ಧರ್ಮದ
ಮಾದರಿ ಹೇಗೆ ?

ಹೊಟ್ಟೆಯು ಒಳಗಿಂ—
ದೇನೋ ಒಂದು
ಚಿಂದಿ ಪತಾಕೆಯು
ಹೊರಗೇ ಬಂದು,
ಕರುಳಿನ ಪರಿಯಲಿ
ಕಾಣುವುದುಂಟು !
ಮುಪ್ಪಿನ ಕಾಲದ
ಭಾಗ್ಯದ ಗಂಟು !
ಒಂದೇ ಸರ್ತಿಗೆ
ಬಾರದು ಮರಣ !
ತುಸು ತುಸು ಬಸಿದೇ
ಮುಗಿವುದು ಪ್ರಾಣ !
ನಿನ್ನಾಯುಷ್ಯವ
ದೂಡಲು ಮುಂದೆ
ಸೂಜಿಯ ಚುಚ್ಚುತ
ಹೊಲಿವರು ಚಿಂದೆ.
ಈ ಪರಿ ಹುಟ್ಟಿತು
'ಸರ್ಜರಿ' ವಿದ್ದೆ,
ವಿದ್ದೆಗೆ ನೀನೇ
ಕಾರಣಳಾದೆ.

## ಕೌದಿ

ಇಂತಿದೆ ನಿನ್ನದು
ಜೀವನ ಕಷ್ಟ;
ಸೇವಾಸಕ್ತಿಗೆ
ಮನ ಸಂತುಷ್ಟ.
ಸಂಕಟದಲ್ಲೂ
ಸೇವೆಗೆ ತಪ್ಪೆ !
ಸಾಯುವ ವರೆಗೂ
ದೇಹದ ಹಿಪ್ಪೆ !
ನಿನ್ನೀ ಗೀತವು
ನನ್ನಾವೇಶ,
ಮಾನವ ಜಾತಿಗೆ
ನವ ಸಂದೇಶ !

---

# ಸಂಸಾರದ ಭಾಗ್ಯ

"ಹೆಂಡತಿ ಮಕ್ಕಳನೆಲ್ಲರನುಳಿದು
ವೈರಾಗಿಯು ನಾನಾಗುವೆನು;
ಸಂಸಾರದ ಹುಸಿ ಜಾಲವ ಹರಿದು
ಭಗವಂತನ ಕಡೆ ಸಾಗುವೆನು"

ಏತಕೆ ಮರುಳೇ, ಈ ವೈರಾಗ್ಯ!
ನೋಡೈ ಸುಖ-ಸಂಸಾರದ ಭಾಗ್ಯ:-
ನಿರ್ಮಲ ಮನಸಿನ ಮಕ್ಕಳ ನಗೆಯು
ಮಹಾದೇವನು ಹೊರಸೂಸುವ ಬಗೆಯು;
ದೇವನು ನಾನಾ ರೂಪವ ತಳೆದು
ಭೂಮಿಗೆ ಬರುವನು ಸ್ವರ್ಗವನುಳಿದು;
ತಾಯಿಯ ಹೃದಯದ ಮೋಹದಿ ಬಂದು
ಮಕ್ಕಳ ಮುದ್ದಿನ ಜೊಲ್ಲಲಿ ಮಿಂದು
ಸಂಸಾರದ ತಿಳಿ ಸಾರವಿದೆಂದು
ನಲಿನಲಿದಾಡುವ ಕಂಗಳ ಮುಂದು;
ಕಂಗಳ ಮುಂದಿನ ದೇವರನುಳಿದು
ಕಾಣದ ಲೋಕಕೆ ಬಿಜಯಂಗೈದು
ಆತನ ನೋಡಲು ಬಯಸುವದೇಕೆ?
ಸನಿಯದೊಳಿರಲೂ ದೂರದೊಳೇಕೆ?

ಸತಿಯೂ ಪತಿಯೂ ಮಗುವೂ ಜಗವೂ
ಎಲ್ಲವು ದೇವನ ಪ್ರತಿಬಿಂಬ;
ಈ ಸಂಸಾರವೆ ಮುಕ್ತಿಯ ಲೋಕದ
ದಾರಿಯ ತೋರುವ ಕೈಗಂಬ!

---

# ಮುತ್ತು

ಹೂಗಳ ಮುತ್ತು
ಗಾಳಿಗೆ ಗೊತ್ತು ;
ಗಿರಿಗಳ ಮುತ್ತು
ಮುಗಿಲಿನ ಸೊತ್ತು;
ಚಂದ್ರನ ಮುತ್ತು
ಹುಣ್ಣಿಮೆಗಿತ್ತು;
ಸೂರ್ಯನ ಮುತ್ತು
ವಿಶ್ವದ ಸೊತ್ತು.

ಮೂಡುವ ಹೊತ್ತು
ಮೂಡಲ ಮುತ್ತು
ಪಡುವಲ ದಿಕ್ಕಿಗೆ
ಸಂಜೆಗೆ ಇತ್ತು.
ಕಡಲಿನ ಮುತ್ತು
ತೆರೆಗಳ ಸುತ್ತು
ನೊರೆನೊರೆಯಾಗಿ
ಕುಣಿಯುತಲಿತ್ತು.

ತಾಯಿಯ ಬಾಯಿಯ
ಮೋಹದ ಮುತ್ತು
ಏನೂ ಅರಿಯದ
ಕೂಸಿಗೆ ಗೊತ್ತು !
ಎಲ್ಲಾ ಕಡೆಯಲಿ
ದೇವರ ಮುತ್ತು,
ಭಾವತರಂಗದ
ಕವಿಗೇ ಗೊತ್ತು !

---

# ಹೊಟ್ಟೆಯ ವ್ಯಾಜ್ಯ

ಮುಟ್ಟಿದೆನಯ್ಯಾ
ಮುಟ್ಟಿದೆನಯ್ಯಾ
ಕೊನೆಯಲಿ ಯಮರಾಜ್ಯ !
ಹುಟ್ಟಿದ ನಂತರ
ಸಾಯುವ ವರೆಗೂ
ಹೊಟ್ಟೆಯದೇ ವ್ಯಾಜ್ಯ !

ಹಾಳದು ಲೋಕಾ,
ನ್ಯಾಯದ ತೂಕಾ
ಧರೆಯೊಳಗೇ ಇಲ್ಲಾ !
ಯಮಲೋಕದ ಸುಖ
ಹೆಚ್ಚಿನದಯ್ಯಾ;
ಯಾರಿಗು ಗೊತ್ತಿಲ್ಲಾ !

ಹೊಟ್ಟೆಗು ನನಗೂ
ದಿನ ದಿನ ವ್ಯಾಜ್ಯಾ;
ಕೇಳದು ಕಡು ಪಾಪಿ !
ಅದಕೂ ಹಟವು,
ನನಗೂ ಚಟವು,
ಇಬ್ಬರು ಕಡು ಕೋಪಿ.

ನಡೆಯಿತು ಯುದ್ಧಾ,
ಗುದ್ದಿಗೆ ಗುದ್ದಾ,
ಹೋಯಿತು ನರಜೀವಾ;

## ಹೊಟ್ಟೆಯ ವ್ಯಾಜ್ಯ

ನೋಡುತ ದೇವನು
ಸುಮ್ಮಗೆ ನಿಂತನು
ತಪ್ಪಿಸದೇ ಸಾವಾ !

ಜೀವವು ಸತ್ತರು
ನಾ ಬದುಕಿದ್ದೆ !
ಹೋಯಿತು ತಕರಾರು;
ನ್ಯಾಯಾಧೀಶನು
ನನಗೇ ಬೈದನು !
ಹೊಡೆದನು ಐದಾರು !

ಸೆರೆಮನೆಗಟ್ಟಲು,
ಅನ್ನವ ಮುಟ್ಟಲು,
ಶಕ್ತಿಯು ತುಸು ಬಂತು;
ತಪ್ಪಿಸಿಕೊಂಡೇ
ಬಂದೇ ಬಿಟ್ಟೆನು
ಯಮಲೋಕಕೆ ಇಂತು !

ಮುಟ್ಟಿದೆನಯ್ಯಾ
ಮುಟ್ಟಿದೆನಯ್ಯಾ
ಕೊನೆಯಲಿ ಯಮರಾಜ್ಯ !
ಹುಟ್ಟಿದ ನಂತರ
ಸಾಯುವ ವರೆಗೂ
ಹೊಟ್ಟೆಯದೇ ವ್ಯಾಜ್ಯ.

---

# ಕವಿ ಕುಮಾರವ್ಯಾಸ

೧

ಸಗ್ಗವಾಗುವುದು ಹಿಗ್ಗಿ ಬುವಿ
ಹಾಡೆ ನೀನು ಭೂಲೋಕ ಕವಿ!
ನಿನ್ನ ಮಾತುಗಳ ಸುಮಗಳನು
ಕುಯ್ದು ಹೃದಯದಲಿ ನೇಯುವೆನು;
ಹಿಗ್ಗಿ ಹಾರುವುದು ಎನ್ನ ಬಗೆ
ಗದುಗಿನ ಭಾರತ ನಾನೋದೆ.

ಹಾಡಿನ ಕಂದಾ
ಹೂಮಕರಂದಾ
ಕವಿತಾನಂದಾ

ನಾಡೆ ಹಾಡೆ ಕನ್ನಡ ಕೋಗಿ
ವಸಂತಋತುವಾಯಿತು ಮಾಗಿ

೨

ಹರಿವುದು ಭಾವವು ಒಡಮೂಡಿ
ನಿನ್ನ ಕಾವ್ಯದಲಿ ನಲಿದೋಡಿ;
ಇಂದಿನ ಕವಿಗಳ ಸಂಗೀತ
ನಿನ್ನ ಮುಂದೆ ಯಾವುದು ಗೀತ?
ಹೊಸ ಹುರುಪಿನ ಕಬ್ಬಿಗ ನೀನು
ಭಾವವರಳಿಸುವ ಕವಿ ಭಾನು!

ನಿನ್ನಯ ಕಬ್ಬ
ಸೊಬಗಿನ ದಿಬ್ಬ,
ಕವಿ ನೀನೊಬ್ಬ

ನಾಡೆ ಹಾಡೆ ಕನ್ನಡ ಕೋಗಿ
ವಸಂತ ಋತುವಾಯಿತು ಮಾಗಿ

೩

ಅರಳಿತು ಹಾಡಿನ ಹೊಸ ಹೂವು,
ತಲೆದೂಗಿತು ರಸಿಕತೆ-ಹಾವು,
ಹಣ್ಣಾಯಿತು ಕನ್ನಡ ಮಾವು
ಹಣ್ಣಿನ ರಸ ಹೀರಲು ನಾವು,
ಸಕ್ಕದ ಬೆಲ್ಲವ ಹದಗೊಳಿಸಿ
ಸಕ್ಕರೆ ಮಾಡಿದೆ ಕನ್ನಡದಿ

ಕವನದ ಕೋಗಿ,
ಷಟ್ಪದಿ-ಭೋಗಿ,
ಕವಿಗಳ ಯೋಗಿ,

ನಾಡೆ ಹಾಡೆ ಕನ್ನಡ ಕೋಗಿ
ವಸಂತ ಋತುವಾಯಿತು ಮಾಗಿ

೪

ವ್ಯಾಕರಣದ ಜಾಲವ ಹರಿದು,
ರೂಢಿಯ ಕಾಲ್-ಕಡಗವ ಮುರಿದು,
ಹಕ್ಕಿಯಂತೆ ನಭದಲಿ ಹಾರಿ,
ಚಿಕ್ಕೆಯಂತೆ ಹೊಳಪನು ತೋರಿ,
ಮಿಂಚಿನಂತೆ ಭಾವವ ಬೀರಿ
ಜಗವನು ಮೆಚ್ಚಿಸಿದುಪಕಾರಿ!

ನಿನ್ನಯ ಕವನ
ಬೀಸುವ ಪವನ
ಭಾವದ ಭವನ

ನಾಡೆ ಹಾಡೆ ಕನ್ನಡ ಕೋಗಿ
ವಸಂತ ಋತುವಾಯಿತು ಮಾಗಿ.

೫

ಕನ್ನಡವೆಣ್ಣಿಗೆ ಸಿಂಗಾರ
ಇನ್ನೇತಕೆ ನೀನಿರೆ ಹಾರ?
ಕಾವ್ಯಶರೀರಕೆ ಬಗೆಗಣ್ಣು,
ಇರುಳಿಗೆ ಹುಣ್ಣಿಮೆ-ಪೆರೆಹಣ್ಣು,
ಭಾವದ ತೋಟಕೆ ಎರೆಮಣ್ಣು,
ಇಂತಿರುವುದು ಗದುಗಿನ ಹೊನ್ನು;

ಭಕ್ತಿಯು ಬೇರು
ಮುಕ್ತಿಯು ನೀರು
ಶಕ್ತಿಯು ಸಾರು,

ನಾಡೆ ಹಾಡೆ ಕನ್ನಡ ಕೋಗಿ
ವಸಂತ ಋತುವಾಯಿತು ಮಾಗಿ

೬

ವ್ಯಾಸರು ಜನಿಸಿದರೆರಡು ಸಲ!
ಭಾರತ ಮಾತೆಯು ಭೂಮೀತಲ
ಕೋಗಿಲೆ ಹಾಡುವ ವನವಾಯ್ತು
ವನದಲಿ ಗದುಗೇ ಮನೆಯಾಯ್ತು;
ಭಾರತ ಕನ್ನಡಿಗರದಾಯ್ತು
ಕನ್ನಡಿಯಂದದಿ ತಿಳಿಯಾಯ್ತು;

ಸಂಸ್ಕೃತ ಧನ್ಯ
ಕನ್ನಡ ಮಾನ್ಯ
ಎರಡೂ ಚಿನ್ನ,

ನಾಡೆ ಹಾಡೆ ಕನ್ನಡ ಕೋಗಿ
ವಸಂತ ಋತುವಾಯಿತು ಮಾಗಿ.

---

# ಕಾಳಿ ಗೌಡ

ನಮ್ಮ ಹಳ್ಳಿಯು ಕಾಳಿ ಗೌಡನು
ಬಾಳ ತುದಿಯಲಿ ನಿಂದರೂ
ಚಿಗುರನಂದದಿ ಮಣಿದು ಕುಣಿದನು
ಬಿರುಸು ಗಾಳಿಯು ಬಂದರೂ

ತಲೆಯ ಕೂದಲು ಹತ್ತಿಗೂ ಬಿಳಿ,
ಹೃದಯ ತಿಳಿ ತಿಳಿ ತೆಳ್ಳಗೆ;
ಬಾಳ ಝುರಿಯದು ಹರಿದು ಹರಿದೂ
ಹಾಲಿನಂದದಿ ಬೆಳ್ಳಗೆ

ಊರ ಮಕ್ಕಳಿಗೆಲ್ಲ ಅಜ್ಜನು,
ಪ್ರಾಯದವರಿಗೆ ಕಕ್ಕನು,
ಹಳ್ಳಿ ಹೆಂಗಳೆಯರಿಗೆ ಮಾವನು,
ಗೌಡನಾಗಲು ತಕ್ಕನು

ಜನರ ನಗುವೇ ಗೌಡನೈಸಿರಿ,
ಅವನ ಹೆಸರೇ ಊರಿಗೆ;
ಕಾಳಿ ಗೌಡನ ಹಳ್ಳಿಯೆಂದರೆ
ಹೆಮ್ಮೆ ನಾಡಿನ ಜನರಿಗೆ

ಹಳ್ಳಿ ಬಡವರು ಮುಗಿಲ ನೋಡಲು
ಕಣಜವನೆ ತೆರೆದಿಟ್ಟನು;
ಕಾಳಿ ಗೌಡನಿಗಿಲ್ಲ ಚಿಂತೆಯು,
ಊರ ಸೆಟ್ಟಿಯು ಕೆಟ್ಟನು

ದೂರ ಜಾತ್ರೆಗೆ ಬಂದ ಜನರಿಗೆ
ಕಾಳಿ ಗೌಡನ ಭೋಜನ,
ನೂರುಗಟ್ಟಲೆ ಜನಕೆ ಬಡಿಸಿದ
ಮೇಲೆಯೇ ಹರಿ ಪೂಜನ

ಗಿಳಿಯು ಪಂಜರದಲ್ಲಿ ಕಾಣಲು,
ಮುದಿಯ ಮನಸಿಗೆ ಕನಿಕರ;
ಸೆರೆಯ ಬಿಡಿಸಿದ ಹೊರತು ಹೋಗದು
ಕಾಳಿ ಗೌಡನ ಚಳಿಜ್ವರ

ಅವನ ತೋಟದ ಕಬ್ಬು ತಿನ್ನದ
ಒಬ್ಬನೂ ಸಹ ಸಿಕ್ಕನು;
ನೆಟ್ಟ ಕಬ್ಬುಗಳೆಲ್ಲ ಮುಗಿಯಲು
ತನಗೆ ತಾನೇ ನಕ್ಕನು

ಮನೆಯ ತೋಟದ ಬಾಳೆ ಕೊನೆಯಮ
ಊರ ಮಕ್ಕಳ ಬಾಯಲಿ;
ಕಾಳಿ ಗೌಡನ ಪುಣ್ಯ ಕರ್ಮವೆ
ನಮ್ಮ ಸೀಮೆಯ ಕಾಯಲಿ

ಏನು ಹೇಳಲಿ ಜನರ ಸಂದಣಿ
ಪುಣ್ಯ ಪುರುಷನ ಯಾತ್ರೆಗೆ;
ಇಷ್ಟು ಜನ ಕೂಡುವುದು ಕಷ್ಟವು
ನಾಡ ದೇವರ ಜಾತ್ರೆಗೆ

ಹಕ್ಕಿಪಕ್ಕಿಯ ಬಳಗವೂ ಸಹ
ಮಸಣದಾಚೆಯ ಮರದಲಿ
ತನ್ನ ದುಃಖವ ಹೇಳಿಕೊಂಡಿತು
ಹಾಡಿ ಕರ್ಕಶ ಸ್ವರದಲಿ

ಗ್ರಾಮ ಕಟ್ಟೆಯ ವೃದ್ಧ ವೃಕ್ಷವು
ಬಾಡಿ ಹೋಯಿತು ಆಲವು;
ಮುದುಕರಿಬ್ಬರು ಮಾಯವಾಗಲು
ಊರಿಗೇ ಬರಗಾಲವು

ಇಂದಿಗೂ ಜನ ಕಣ್ಣನೊರಸುತ
ಕಾಳಿ ಗೌಡನ ನೆನೆವರು;
ಊರ ಬಡ ಕಂಗಾಲರೋ ? ಪರ-
ದೇಶಿ ಜೀವಿಗಳಾದರು

———

# ಕಾಲಿನ ಜೋಡು

ಕಾಲಲಿ ನಡೆಯುವ ನಿನ್ನನು ನೋಡಿ,
ನೂತನ ಭಾವನೆ ಮನದಲಿ ಮೂಡಿ,
ಮಿನುಗುತಲಿದೆ ಹೊಸ ಕವನವ ಕೂಡಿ;
ಕಾಲಿನ ಸೇವಕನೆ

ಗೋಮಾತೆಯ ಚರ್ಮವು ನೀನಾದರು,
ಭೂದೇವಿಯ ನೀನಗಲದೆ ಇದ್ದರು,
ಮನೆಯೊಳಗೇತಕೆ ನಿನ್ನನು ಒಯ್ಯರು?
ನನಗಿದು ಸೋಜಿಗವು!

ಸೇವೆಯ ಮಾಡುವದೊಂದೇ ಅರಿತು,
ಸುಖದುಃಖದ ಹುಸಿ ಮಾಯೆಯ ಮರೆತು,
ಮುಳ್ಳಲಿ ನಡೆಯುವ ನಿನ್ನನು ಕುರಿತು
ಹೊಗಳುವರಾರಣ್ಣಾ ?

ಇದ್ದರೆ ಇರಬೇಕಿಂತಹ ಜೋಡಿ!
ಯಾವಾಗಲು ನೀವಿಬ್ಬರು ಕೂಡಿ
ಸುಖದುಃಖದ ಸರಿ ಪಾಲನು ಮಾಡಿ
ದಿನಗಳ ದೂಡುವಿರಿ

ಬಲಗಾಲಿನ ಅಂಗುಷ್ಠವು ಹರಿಯೆ,
ಎಡಗಾಲ್- ಕೆರವೇ, ಮುಂದಕೆ ಸರಿಯೆ;
ಒಬ್ಬನ ಸಂಕಟವಿಬ್ಬರು ಅರಿಯೆ
ಮೇಲ್ಮೆಯು ಧರೆಯೊಳಗೆ

## ಕಾಲಿನ ಜೋಡು

ಕೆರವೇ, ನಾವ್ ನೆಲತಾಯಲಿ ಹುಟ್ಟಿ,
ಆಕೆಯ ಚಲುವಾದೊಡಲನೆ ಮುಟ್ಟಿ,
ಹೊಲಸಿನ ಸ್ಥಳದಲಿ ನಿನ್ನನು ಮೆಟ್ಟಿ
ಕೆಟ್ಟವು ನರರಾಗಿ!

ಕಾಲಿನ ಸೇವಕ, ಹೇಳುವೆ ಕೇಳು–
ಮನುಜನಗಿಂತಲು ನೀನೇ ಮೇಲು!
ಮುಂದಿನ ಜನ್ಮದಿ ನನ್ನೀ ಬಾಳು
ಆಗಲಿ ನಿನ್ನಂತೆ.

---

# ಉತ್ತರ ಕನ್ನಡ

ಉತ್ತರ ಕನ್ನಡ,
ಎತ್ತರ ಗುಡ್ಡ,
ಸುತ್ತಲು ಹಚ್ಚಗೆ
ಚಪ್ಪರ ದೊಡ್ಡ

ಮುಗಿಯದ ಬೆಟ್ಟ
ಮುಗಿಲಿನ ಮುಟ್ಟ;
ಕಂದರ, ಹಂದರ,
ಹಸುರಿನ ದಟ್ಟ

ಕನ್ನಡ ನಾಡಿನ
ಕಡಲಿನ ಸೀಮೆ,
ಬಣ್ಣಿಸಿದಷ್ಟೂ
ಇನ್ನೂ ಕಡಿಮೆ

ಹರಿಯುವ ಮುರಿಯುವ
ಝರಿಗಳ ವೇಣಿ,
ಪಕ್ಕದೊಳೆರಡೂ
ಪರ್ವತ ಶ್ರೇಣಿ

ಪಡುವಣ ಪರ್ವತ-
ದಂಗಳ ಬೀಡು;
ತೆಂಗಿನ ತೋಟದ
ಮಂಟಪ ನೋಡು

## ಉತ್ತರ ಕನ್ನಡ

ಅಡಿಕೆಯ ಕೊನೆ ಬಾ-
ಸಿಂಗವು ನಮಗೆ,
ಯಾಲಕ್ಕಿಯ ಮಾ-
ಲೆಯು ಕೊರಳೊಳಗೆ

ಮೆಣಸಿನ ಕಾಳಿನ
ಮಂಗಳ ಸೂತ್ರ,
ಬಾಳೆಯ ತಾಳೆಯ
ಸೋಗೆಯ ಛತ್ರ

ನೊರೆಯ ತರಂಗದ
ರಂಜಿತ ಕುಣಿತ,
ನಾನಾ ಖಗದ ಸು-
ಮಂಗಲ ಗೀತ

ಕಡಲಲಿ ಬಿಂಬಿಸೆ
ಸಂಜೆಯು ಅರುಣ
ಕುಂಕುಮ-ಜಲದಲಿ
ಗಿರಿಗಳ ಚರಣ

ಸ್ವರ್ಗ ನಿಸರ್ಗವು,
ಸೊಬಗಿನ ದಿಬ್ಬ;
ಎಲ್ಲಾ ಕಡೆಯಲಿ
ಕಣ್ಣಿಗೆ ಹಬ್ಬ

ಹುಟ್ಟುವುದಾದರೆ
ಇನ್ನೂ ಇನ್ನೂ
'ಉತ್ತರ ಕನ್ನಡ-
ದಲ್ಲೇ' ಅನ್ನು

———

# ಕವಿಯ ಕಮಲೆ

ಕಂಡೆನು ಸುಂದರಿ ಕಮಲೆಯನು,
ಕಂಡೆನು ಕೋಮಲೆ ವಿಮಲೆಯನು,
ಹೆಂಡತಿಯೊಬ್ಬಳು ಕವಿಗಿರಬೇಕೆಲೆ ?
ಕಮಲೆಗೆ ಈ ಪರಿ ಕೇಳಿದೆನು:—

ಕವಿಯನು ವರಿಸಲು ಒಪ್ಪುವಿಯೇ ?
ಕವನವ ಕೇಳಲು ತಪ್ಪುವಿಯೇ ?
ಕಲ್ಪನೆಗಳ ಹೂಮಾಲೆಯ ಪೋಣಿಸಿ,
ರಮಣಿಯ ಕೊರಳಲಿ ಹಾಕುವೆನು.

ಚಿನ್ನದ ಭೂಷಣ ನಿನಗೆಲ್ಲಿ ?
ರನ್ನದ ಉಂಗುರ ಸಿಗದಿಲ್ಲಿ;
ಕನ್ನಡ ನುಡಿಯಲಿ ಕೆತ್ತಿದ ಕಲ್ಪನೆ
ನನ್ನಾ ಮಡದಿಯ ಸಿಂಗರವು.

ಜಗದರಮನೆಯಲಿ ಕೂಡುವೆನು;
ಮುಗುದೆಯ ಸೊಬಗನು ಹಾಡುವೆನು;
ಕತ್ತಲೆಯೆಂಬುವ ಕೂದಲ ಮುಡಿಯಲಿ
ಮಿನುಗುವ ಚಿಕ್ಕೆಯ ಮುಡಿಸುವೆನು.

ಕೆರೆಯೇ ಕನ್ನಡಿ ನಿನಗಾಯ್ತು,
ತೊರೆಯೇ ತೈಲವು ತಲೆಗಾಯ್ತು,
ಧರಣಿಯ ಹಸುರಿನ ಹುಲ್ಲಿನ ಸೀರೆಯು,
ಮುಂಜಿನ ಮಣಿಗಳ ಕುಪ್ಪಸವು.

ಕಂತುವ ದಿನಕರ ಕುಂಕುಮವಾ,
ಕಾಡಿನ ವೃಕ್ಷವು ಚಂಪಕವಾ,
ನೀಡುವುವಲ್ಲದೆ ಮಿಂಚಿನ ಹೊಳಪನು
ನೀಡುವೆ ನಿನ್ನಗೆ, ವಜ್ರವಲಾ !

ವರಿಸುವೆಯೇನೇ ಚಲುವು ಕಣಿ ?
ವರಿಸುವವಾದರೆ ಕೇಳೆ ಮಣಿ,
ಚಿರಕಾಲವು ನಿನ್ನಯ ಪತಿರಾಜಗೆ
ಮರಣವು ಬಾರದು ಹೇ ರಮಣಿ.

ನೀನೆಂದಿಗು ಸೌಭಾಗ್ಯವತಿ,
ಅಮರನಲ್ಲವೇ ನಿನ್ನ ಪತಿ ?
ಕವಿಗಳ ಜೀವನ ಕವನದಲ್ಲಿಯೆ,
ಕವನವೆಂದಿಗೂ ಅಮರ ಸಖಿ !

———

# ತೋಟಿಗ

ಸೇವಕ:— ರಾಣೀ, ಸೇವಕನಲಿ ದಯೆ ತೋರಿ

ರಾಣಿ:— ಸೇವಕರೆಲ್ಲರು ಓಲಗ ಸೇರಿ
ಈಗಲೆ ಹೊರಟರು; ನೀನೇಕೆಂದು
ತಡಮಾಡಿಲ್ಲಿಗೆ ನಿಂದಿಹೆ ಬಂದು ?

ಸೇವಕ:— ಎಲ್ಲರು ಜಾರಿದ ವೇಳೆಯು ಕಂಡು
ಅದುವೇ ನನಗತಿ ಒಳ್ಳೆಯದೆಂದು
ಬಂದಿಹೆನಿಲ್ಲಿಗೆ ಕಡೆಯಲಿ ತಾಯಿ
ಉಳಿದಾ ಕೆಲಸವ ಮಾಡಲು ಎಂದು.

ರಾಣಿ:— ಕಡೆಯಲಿ ಬಂದರೆ ಕೆಲಸೆಲ್ಲಿಹುದು ?

ಸೇವಕ:— ನನ್ನನು ತೋಟಿಗನನು ಮಾಡುವದು.

ರಾಣಿ:— ಹಾ! ಹಾ! ಹಾ! ಹಾ! ಮತಿ ನಿನಗಿಲ್ಲ

ಸೇವಕ:— ಇಲ್ಲಾ ರಾಣೀ, ನಾ ಹಾಗಲ್ಲ
ಕತ್ತಿಯ ಬರ್ಚಿಯ ಬಿಸುಡುವೆನಿಲ್ಲಿ,
ದೂರದ ದೇಶಕೆ ಹೋಗೆನು ಅಲ್ಲಿ;
ಹೊಸ ರಾಜ್ಯಗಳನು ಜಯಿಸಲು ಎಂದು
ಕಳಿಸಲು ಬೇಡರಿ ನನ್ನನು ಇಂದು;
ನನ್ನನು ತೋಟದ ಸೇವಕ ಮಾಡಿ
ಹೂಗಳ ಕೊಯ್ಯಲು ಗೀತವ ಹಾಡಿ.

ರಾಣಿ:— ತೋಟಿಗನಾಗಲು ಮಾಡುವೆಯೇನು ?

ಸೇವಕ:— ರಾಣೀ, ರಾಣೀ, ಆ ಬಳಿಕೇನು ?
ರಾಣಿಯು ತೋಟಕೆ ಬರುವಳು ಎಂದು

ಹುಲ್ಲಿಗೆ ನೀರನು ಎರೆಯುವೆನೆಂದು
"ರಾಣಿಯ ಹೆಜ್ಜೆಯ ಬುಡದಲಿ ಬಿದ್ದು
ಮರಣವ ಗೆದ್ದರೆ ನಮಗದು ಮುಂದು
ಮುಕ್ತಿಯ ಮಾರ್ಗವ ತೋರಿಪುದೆ"ಂದು
ಸಂತಸದಿಂದಲಿ ನಲಿಯುವ ಹೂಗಳ
ತಿಳಿ ನೀರೆರೆಯುತ ಸಾಕುವೆನೆಂದು.
ಮುದಿಯಾಲಕೆ ಜೋಕಾಲಿಯ ಕಟ್ಟಿ
ತೂಗುವೆ ನಿಮ್ಮನು ನಾ ಮನಮುಟ್ಟಿ;
ಎಲೆಯೊಳಗಿಂದಲಿ ಚಂದಿರನಾಗ
ಮುತ್ತಿಡುವನು ನಿಮ್ಮಂಗಕೆ ಬೇಗ.
ಅರಮನೆಯಲಿ ಬೆಳಗುವ ಬಿಳಿ ದೀಪಕೆ
ಗಂಧವೆಣ್ಣೆಯನು ಕುಡಿಯಲು ಕೊಟ್ಟು
ನಿಮ್ಮಾ ಮಲಗುವ ಕೋಣೆಯೊಳೆಲ್ಲ
ಹೂ ಹಾಸಿಗೆಯನು ಹಾಸುವೆನಲ್ಲಾ ?

ರಾಣಿ: — ತೋಟಿಗನಾಗಲು ಸಂಬಳವೆನಿತು ?

ಸೇವಕ: — ಸಂಬಳವೇ ? ಆ ಸಂಬಳವಿಂತು: —
ರಾಣಿಯ ಕರಕಮಲಗಳನು ಹಿಡಿದು
ಹೂಬಳೆಗಳ ತೊಡಿಸುವದೇ ಸೊಗಸು;
ರಾಣಿಯ ಕಾಲಲಿ ಕಡಗವ ಹಾಕಿ
ಪಾದದ ಧೂಳಿಯ ಬಿಡುವೆನು ನೆಕ್ಕಿ;
ಇದರಿಂದೊದಗುವ ಭಕ್ತಿಯ ಸುಖವೇ
ಸಂಬಳವೆನಿಸುವದಲ್ಲವೆ ನನಗೆ ?

ರಾಣಿ: — ಆಗಲಿ ಸೇವಕ, ಚಿಂತೆಯ ನೀಗು,
ಹೂವಿನ ತೋಟದ ತೋಟಿಗನಾಗು.

---

# ಕಸ ಗುಡಿಸುವ ಪಂಚಮರು

೧

ಲಕ್ಷ ಲಕ್ಷ ಜನಸಂಖ್ಯೆಯ ಪಟ್ಟಣ;
ಡಾಮ್ರ ಮಾರ್ಗಗಳು ಬಿಸಿಲಲಿ ರಣರಣ;
ಜನರ ಸಂದಣಿಯ ಗೊಂದಲದಲ್ಲಿ
ಬಂಡಿ ಗಾಡಿಗಳ ಸಪ್ಪಳ ಝಣಝಣ;
ಯಾರು ಯಾರಿಗೂ ಕಾಣಿಸರು !
ಹೊಲಸು ಓಣಿಯಲಿ ಹರಿಜನರು !

೨

ಬೀದಿ ಬೀದಿಯಲಿ ಬೀರಿದ ಕಸವು,
ಗುಡಿಸಿ ಗುಡಿಸಿ ತುಸು ತುಸು ತುಸು ತುಸುವು,
ತುಂಬ ತುಂಬಲದು ಪರ್ವತ ರಾಶಿ;
ಕಾಯಕಷ್ಟವೇ ಜೀವದ ಕಸುವು !
ಕರ್ಮಯೋಗಿಗಳು ಪಂಚಮರು,
ಧರ್ಮಜೀವಿಗಳು ದುಡಿಯುವರು

೩

ತಲೆಯ ಮೇಲೆ ಕಸಗುಡಿಸಿದ ಗಂಟು;
ಕಂಕುಳಲ್ಲಿ ಕಸಬರಿಗೆಯು ಉಂಟು;
ಸಕಲ ಲೋಕವನು ಗುಡಿಸಿದ ಪುಣ್ಯ
ಮೈಯ ಬೆವರಿನಲಿ ಸುರಿಯುವುದುಂಟು !
ತ್ಯಾಗಿಯೋಗಿಗಳು ಹರಿಜನರು,
ಕಷ್ಟಭೋಗಿಗಳು ಬಡ ಜನರು

೪

ಮಸಣದೀಶ್ವರನು ಕೃತಯುಗದಲ್ಲಿ
ವಿಷ ಕುಡಿಯಲು ಜಗ ಬದುಕಿತು ಅಲ್ಲಿ;
ಹಾಳು ಬಿದ್ದ ಈ ಕಲಿಯುಗದಲ್ಲಿ
ಕಸ ಗುಡಿಸದೆ ಶಿವ ಹೋದನು ಎಲ್ಲಿ ?
ದುರಿತ ಭಕ್ಷಕರು ಯಾರಿವರು?
ಲೋಕ-ರಕ್ಷಣೆಯ ಪಂಚಮರು

೫

ಹೊಲಸು ನಾರಿದರು ಹಿಡಿಯರು ಮೂಗ!
ಯಾವ ದೇವನಿಗು ನಿಲುಕದ ತ್ಯಾಗ!
ಕೊಳೆತ ಲೋಕವನು ತೊಳೆವ ಸಾಹಸವು
ಕರ್ಮಜೀವಿಗಳ ಸತತೋದ್ಯೋಗ.
ಶ್ರೇಷ್ಠ ಸೇವಕರು ಹರಿಜನರು
ಕಷ್ಟಕಾಯಕದ ವಾನರರು

೬

ಕಸ ಗುಡಿಸುವ ಬಡ ಜೀವಿಗಳೊಮ್ಮೆ
ಸುಮ್ಮನೆ ಮಲಗಲು, ಸಾಯಲು ಎಮ್ಮೆ,
ಮುಟ್ಟುವರಿಲ್ಲದೆ ಕೆಟ್ಟಿತು ಜಗವು,
ಮೂಗು ಮೂಗಿನಲಿ ಬಟ್ಟೆ ವಾಸನೆ!
ಲೋಕಪಾಲಕರು ಯಾರಿವರು ?
ಯಲ್ಲಮ್ಮನ ಪರಿ ಪೂಜಕರು

೭

ರೋಗಜಂತುಗಳು ಹುಟ್ಟುವ ಮುನ್ನ
ಚೊಕ್ಕ ಮಾಡುವರು ಪೃಥ್ವಿಯ ಬೆನ್ನ;

ನಿತ್ಯ ಕರ್ಮದಲಿ ನರಕವ ಗುಡಿಸಿ,
ಭೂಮಿಗೆ ಸ್ವರ್ಗವನಿಳಿಸುವರಣ್ಣಾ !
ಚೊಕ್ಕಟ ಮಕ್ಕಳು ಹರಿಜನರು,
ಉತ್ಕಟ ಸೇವಾತತ್ಪರರು

೮

"ಕಸ ಗುಡಿಸುವ ಚಾಂಡಾಲನು ಭ್ರಷ್ಟ!
ಮುಟ್ಟಲು, ಗಳಿಸಿದ ಪುಣ್ಯವು ನಷ್ಟ!"
ಅನ್ನುವ ಧರ್ಮಶಿರೋಮಣಿ, ಕೇಳೈ:—
ಮುಟ್ಟದೆ ಇರಲವ ಜಗವೇ ಭ್ರಷ್ಟ!
ಕಸಬರಿಗೆಯು ವರ ಪಂಚಮರು
ಪುಣ್ಯ ಪುರಾತನ ಪೂರ್ವಜರು

---

# ವೀರ ಮೈಸೂರು

ಟೀಪು ವ್ಯಾಘ್ರನೆ, ಮಡಿದು ನೀನು
ನೂರು ವರುಷಗಳಾದುವೇನು ?
ನೀನೆ ಕನ್ನಡ ಕೊನೆಯ ಭಾನು !
ವೀರ ಮೈಸೂರು. || ೧ ||

"ನನ್ನ ನಾಡಿದು ನನ್ನ ಬೀಡಿದು,"
"ನನ್ನ ತಾಯೀ, ನನ್ನ ದೇವಿ,"
ಎಂದು ನುಡಿದೆ. ಹಾಗೆ ಮಡಿದೆ !
ವೀರ ಮೈಸೂರು || ೨ ||

ನಾಡ ಬಡತನ ನೋಡಲಿಲ್ಲ;
ತಾಯ ದುಗುಡವ ಕೇಳಲಿಲ್ಲ;
ಪರರ ಅಡಿಯಾಳಾದುದಿಲ್ಲ !
ವೀರ ಮೈಸೂರು || ೩ ||

ನಿನ್ನ ಕಾಲೊದಳೇನು ಚಂದ !
ಹಸರು ಭೂಮಿಯು ಪಸಲೆಯಿಂದ
ಸುತ್ತುಮುತ್ತಲು ವೈರಿನಿಂದ
ವೀರ ಮೈಸೂರು || ೪ ||

ರಂಗಸ್ವಾಮಿಯ ಹಾಡ ಹಾಡಿ
ಹಿಂದು-ಮುಸಲರನೊಂದುಮಾಡಿ !
ನೆಲಸನಾಳಿದೆ ನಿಜವ ನೋಡಿ !
ವೀರ ಮೈಸೂರು || ೫ ||

ಯುದ್ಧ ಮಾಡಿದೆ ಧೈರ್ಯಪಟ್ಟು
ಜೀವ ಬಲಿದಾನವನು ಕೊಟ್ಟು
ಧನ್ಯವಾದುದು ನಿನ್ನ ಹುಟ್ಟು !
ವೀರ ಮೈಸೂರು ‖ ೬ ‖

ಯುದ್ಧರಥವದು ಗಿಡ್ಡ ಕಾಲು !
ನಿನ್ನ ಕೈಯೋ ಇರಿವ ಕೋಲು !
ಕೆಚ್ಚಿನಾ ಎದೆ ದೊಡ್ಡ ಢಾಲು !
ವೀರ ಮೈಸೂರು ‖ ೭ ‖

ನಿನ್ನ ಕಣ್ಣುಗಳೊಮ್ಮೆ ಹೊಳೆದು
ನಾಡಗೋಸುಗ ದುಡಿದು ದುಡಿದು
ಮುಚ್ಚಿಕೊಂಡವು ನೆಲವ ಹಿಡಿದು !
ವೀರ ಮೈಸೂರು ‖ ೮ ‖

ಪುಣ್ಯ ಕಾವೇರಿಯಲಿ ಹೊಳೆದು
ನಿನ್ನ ಶೌರ್ಯವು ತೇಲುತಿಹುದು;
ನಮ್ಮನದು ಎಚ್ಚರಿಸಲಿಹುದು !
ವೀರ ಮೈಸೂರು ‖ ೯ ‖

ನಿನ್ನ ಕೀರ್ತಿಯನು ಕೇಳಲಂದ,
ನಿನ್ನ ಮೂರ್ತಿಯು ಪೂಜೆಗಂದ,
ಭರತ ಭೂಮಿಯ ಶೂರ ಕಂದಾ
ವೀರ ಮೈಸೂರು ‖ ೧೦ ‖

ನಿನ್ನ ಕೋಟೆಯು ಬೀಳಬಹುದು;
ನಿನ್ನ ಖಡ್ಗವು ಮುರಿಯಬಹುದು;
ನಿನ್ನ ಶೌರ್ಯವು ಮಾಸದಿಹದು !
ವೀರ ಮೈಸೂರು ‖ ೧೧ ‖

———

# ನೆಲ ತಾಯಿ

ತಾಯಿ ಪಾದವ ತೊಳೆಯಲೆಂದು
ಕಡಲ ತೆರೆಗಳು ಹಾರಿ ಬಂದು
ನೊರೆಯ ಬಿಳಿ ಕಾಣಿಕೆಯ ತಂದು
ಭೂಮಿಗರ್ಪಿಸುತಿರುವವು !

ಮುಗಿಲ ಲೋಕವ ಬಿಟ್ಟು ಬಂದು
ಮೋಡಗಳು ಮಳೆ ಹನಿಯ ತಂದು
ತಾಯಿಗದು ಅಭಿಷೇಕವೆಂದು
ಭೂಮಿಗರ್ಪಿಸುತಿರುವವು !

---

# ಕನಸಿನೊಳಗಿನ ಮೀನುಗಾರ

ದೋಣಿ ನೂಕಿ ಬಲೆಯ ಹಾಕಿ,
ಮೀನುಗಾರನು
ಕಡಲ ತೆರೆಯ ನೊರೆಯ ಹಾದು
ಮುಂದೆ ಹೋದನು

ಮುಂದಿನಾಸೆಯಿಂದ ಒಂದು
ಗಳಿಗೆ ಜೀವನ
ಜಲತರಂಗ ಕುಣಿಯುವಂತೆ
ಹಿಗ್ಗಿ ಚೇತನ

ಮುಗಿಲ ತುದಿಯು ಕಡಲಿನಂಚ
ಕೂಡಿದೆಡೆಯಲಿ
ಸೇರುವಾಸೆಯಿಂದ ದೋಣಿ
ಮುಂದೆ ನಡೆಯಲಿ

ಸಾಗಿ ಸಾಗಿ, ನಡುವ ಬಾಗಿ,
ಬಲೆಯ ಬೀಸಿದ;
ನೀಲ ಜಲದ ಮೇಲೆ ಜಾಲ
ಮರಳಿ ಹಾಸಿದ

ಚಂದ್ರಬಿಂಬ ನೀರ ತುಂಬ
ನೋಡಿ ನಲಿದನು.
ಒಂದು ನಿಮಿಷ ರಸಿಕನಾಗಿ
ಕವನಕೊಲಿದನು.

## ಕನಸಿನೊಳಗಿನ ಮೀನುಗಾರ

ತಾಳ ಹಾಕಿ ತಲೆಯ ತೂಗಿ
ಬಲೆಯ ನೆಗೆದನು;
ಮೀನು ಏನು ಬಾರದಿರಲು
ತಿರುಗಿ ಒಗೆದನು

ಕೂತು ಕೂತು, ಮನವು ಸೋತು,
ದಾರಿ ತೋರದು
ಕಡಲ ಹೊಟ್ಟೆಯಿಂದ ಮೀನು
ಹೊರಗೆ ಬಾರದು

ಇರುಳು ನೀಗಿ ಕೋಳಿ ಕೂಗಿ
ಬೆಳಗು ಮೂಡಿತು
ಬಲೆಯೊಳೊಂದು ಮೀನು ಬರದೆ
ಮೊಗವು ಬಾಡಿತು

ಬಲೆಯು ಹರಿದು ದೋಣಿ ಬರಿದು,
ಜಗವು ಶೂನ್ಯವು !
ಮೀನು ಬೇಟೆಯೊಂದರಲ್ಲೆ
ಅವನ ಅನ್ನವು

\+ + + +

“ ಮೀನ ಹಿಡಿದ ಹೊರತು ನಾನು
ಮನೆಗೆ ಹೋಗಲು
ಕೂಳಿಗೇನು ಗತಿಯ ಕಾಣೆ
ಸಂಜೆಯಾಗಲು !

ಮನೆಯ ಹೆಣ್ಣು ಬಸುರು, ಆಕೆ-
ಗೇಳು ತಿಂಗಳು;
ತಿಂಬರೇನು ಮಣ್ಣು ಬೂದಿ
ಮನೆಯ ಮಕ್ಕಳು !

ಆಕೆಗೊಂದು ಸೀರೆಯಿಲ್ಲ,
ಚಿಂದಿಯುಡುವಳು;
ತಲೆಯ ಕೂದಲನ್ನು ಬಾಚಿ
ಹೂವ ಮುಡಿಯಳು !

ಸಣ್ಣ ಪುಟ್ಟಿಗೊಂದು ದಟ್ಟಿ
ತರುವುದಾಗದು;
ತಂದೆಯಾಗಿ ತರುವ ಭಾಗ್ಯ
ಯಾರಿಗಿರುವುದು ?

ಗಂಜಿ-ತೆಳಿಯ ಬಟ್ಟಲಲ್ಲಿ
ಉಪ್ಪು ಇಲ್ಲವು;
ಅಂದ ಮೇಲೆ ಹಬ್ಬದಲ್ಲಿ
ಎಲ್ಲಿ ಬೆಲ್ಲವು ?

ಹಬ್ಬದೂಟವೆಂಬುದಿಲ್ಲ,
ಸಪ್ಪೆ ಗಂಜಿಯೆ;
ಚಳಿಯು ಬರಲಿ, ಮಳೆಯು ಬರಲಿ
ಹರಕು ಅಂಗಿಯೆ

ಹುಡುಗ ಕಾಮು ಸಣ್ಣ ರಾಮು
'ಬೇಕು' ಅಂದರೂ
ವರುಷಕೊಮ್ಮೆ ಹಲಸು ಹಣ್ಣು ?
ಯಾರು ತಿಂಬರು !

ಊರ ಸೆಟ್ಟಿ ಕೊಟ್ಟ ಸಾಲ
ಇನ್ನು ತೀರದು !
ದೆವ್ವದಂತೆ ಬೆನ್ನು ಬಿಡದು;
ದಿಕ್ಕು ತೋರದು

ಮನೆಯ ನೆನಪು ಹಾಳು ಕನಸು!
ಕೇಳು ಬಾಳಿದು !
ಕೇಳು ದೇವ, ನನ್ನ ಮನಸು
ಇನ್ನು ತಾಳದು ! ”

\+ + + +

ಇಷ್ಟರಲ್ಲಿ ದೊಡ್ಡದೊಂದು
ತೆರೆಯು ಹುಟ್ಟಿತು;
ಜಲತುಷಾರ —ಕಡಲು ಕಂಬ-
ನಿಗಳ ಬಿಟ್ಟಿತು !

ಮಿತಿಯು ಮೀರಿ ತೆರೆಯು ಹಾರಿ,
ಡೋಣಿ ಮುಳುಗಿತು;
ಮೀನುಗಾರನೆದೆಯ ದುಃಖ
ಕಡಲು ನುಂಗಿತು.

\+ + +

ಕನಸು ತೀರುತಿಷ್ಟರಲ್ಲಿ,
ಕಣ್ಣ ತೆರೆದೆನು;
ಕಂಬನಿಗಳ ಧಾರೆಯೊರಸಿ
ಕವನ ಬರೆದೆನು!

———

## ಆಳಂಬೆ

ಒಂದೂ ಎರಡು,
ಭೂಮಿಯು ಬರಡು.

ಮೂರೂ ನಾಕು,
ಮಳೆ ಹನಿ ಬೇಕು.

ಐದೂ ಆರು,
ಮೊಗ್ಗೆಯು ತೇರು.

ಏಳೂ ಎಂಟು,
ಛತ್ರಿಯ ದಂಟು.

ಬಳಿಕೊಂಬತ್ತು,
ಇನ್ನೂ ಇತ್ತು.

ಕೊನೆಯಲಿ ಹತ್ತು,
ಹೋಯಿತು ಸತ್ತು.

———

# ಭಿಕ್ಷುಕರು

ಮುಂಜಾವಿಂದಲಿ ಸಂಜೆಯ ವರೆಗೆ
ತಿರುಗುತಲಿರುವೆವು ಮನೆಯಿಂ ಮನೆಗೆ
ಬಿಕ್ಕೆಯ ಬೇಡುತ ಸಾಯುವ ವರೆಗೆ
ಸಾಂಬ ಶಿವಾ ಹರ ಸಾಂಬ ಶಿವಾ !

ವಿಧಿ ಮಾತೆಯ ಮಕ್ಕಳು ಮರಿ ನಾವು!
ಶ್ರೀಮಂತರ ಸಿರಿಯಿಂದೆಮಗೇನು ?
ಕಾಣದ ಕುರುಡನಿಗೇತಕೆ ಭಾನು ?
ಸಾಂಬ ಶಿವಾ ಹರ ಸಾಂಬ ಶಿವಾ !

ದಾನವ ಮಾಡದೆ ಬಿಟ್ಟರೆ ಬಿಡಲಿ;
ಕುಡಿಯಲು ಹರಿಯುವ ನೀರೊಂದಿರಲಿ;
ನೆರಳಿನ ಮರವೇ ಮನೆಯಾಗಿರಲಿ ;
ಸಾಂಬ ಶಿವಾ ಹರ ಸಾಂಬ ಶಿವಾ !

ಅನ್ನವ ಕೊಟ್ಟರು, ಪಾಯಸವಿತ್ತರು,
ರಾಗಿಯ ಅಂಬಲಿ ಗಂಜಿಯ ಕೊಟ್ಟರು,
ಒಂದೆಡೆಗೂಡಿಸಿ ಬಾಯೊಳಗಿಡುವೆವು ;
ಸಾಂಬ ಶಿವಾ ಹರ ಸಾಂಬ ಶಿವಾ !

ಬೇಡುವದೊಂದೇ ಭಿಕ್ಷುಕ ಧರ್ಮ;
ನೀಡುವದೊಂದೇ ದಾನಿಯ ಕರ್ಮ;
ಇಂತಿರುವದು ಭಗವಂತನ ಮರ್ಮ!
ಸಾಂಬ ಶಿವಾ ಹರ ಸಾಂಬ ಶಿವಾ !

ಜೀವದ ಭೀತಿಯು ನಮಗೆಲ್ಲಿರುವುದು;
ಸ್ವಾತಂತ್ರ್ಯದ ಕೋಲೂರುತ ನಡೆವೆವು;
ಊರಿಂದೂರಿಗೆ ತಿರುಗುತಲಿರುವೆವು;
ಸಾಂಬ ಶಿವಾ ಹರ ಸಾಂಬ ಶಿವಾ !

ನಮ್ಮೀ ದೈನ್ಯವೆ ನಮ್ಮಯ ಶಕ್ತಿ!
ಸಂಕಟದಲಿ ಕಾಂಬುದು ಶಿವಭಕ್ತಿ!
ಬಡತನವೆಂಬುದು ಬಡವರ ಮುಕ್ತಿ !
ಸಾಂಬ ಶಿವಾ ಹರ ಸಾಂಬ ಶಿವಾ

ಅರಸನು ಅರಸಾಗಿರುವನು ಇಂದು;
ಆದರು ಹೋಗುವನೆಲ್ಲಿಗೆ ಮುಂದು ?
ಮರಣವ ಸೇರಲು ಎಲ್ಲರು ಒಂದು !
ಸಾಂಬ ಶಿವಾ ಹರ ಸಾಂಬ ಶಿವಾ !

---

# ಬಂಗಾಲದ ಬರಗಾಲ

[ ೧೯೪೩ರಲ್ಲಿಯ ಬಂಗಾಲದ ಬರಗಾಲದಲ್ಲಿ ಲಕ್ಷಾವಧಿ ಜನರು ತೀರಿಕೊಂಡಾಗ ಬರೆದ ಕವನವಿದು ]

ಭೀಕರ ಭೀಕರ ಬರಗಾಲಾ !
ತಳಮಳಗೊಳುತಿದೆ ಬಂಗಾಲಾ ‖ ಪಲ್ಲ ‖

೧

ಎದ್ದರು ಹೆಣವೋ !
ಬಿದ್ದರು ಹೆಣವೋ !
ಬೇಸರ ಬೇಸರ ಬೇಸರಿಕೆ;
ಹದ್ದಿಗು ಬಂದಿದೆ ಓಕರಿಕೆ !

೨

ಸತ್ತರೆ ತಾಯಿ,
ಅತ್ತರೆ ಕೂಸು,
ಹತ್ತರ ಕರೆಯುಲು ಯಾರಿಲ್ಲ:
ಸುತ್ತಲು ಮುತ್ತಲು ಹೆಣವೆಲ್ಲಾ !

೩

ಭತ್ತದ ಭೂಮಿ
ಉತ್ತಮ ಬೆಳೆದೂ
ದುಡಿವರ ತುತ್ತಿಗೆ ಸಿಗಲಿಲ್ಲಾ !
ಕಲಿಯುಗ-ಪುಣ್ಯವು ಮುಗಿದಿಲ್ಲಾ !

೪

ಹೆಣಗಳು ಬಿದ್ದರೆ,
ಎಣಿಸಲು ಹೋದರೆ,
ಕುಲುಕುಲು ನಗುವನು ಯಮದೇವ;
ನೊಣದೊಲು ಬಡವನ ನರಜೀವ !

೫

ಮಾನವ ಕೂಸೇ,
ಶ್ವಾನದ ಹತ್ತಿರ
ಅನ್ನದ ಗೋಸುಗ ಜಗಳಾಟ !
ಆದರು ದೊರೆಯದು ನಿನಗೂಟ !

೬

ಹೆಣಗಳ ಮಾಲೆ
ತೇಲುತ ಮೇಲೆ
ಗಂಗೆಯು ಕೊರಳಲಿ ಶುಭ ಚಿನ್ನಾ !
ಧರೆಯಲಿ ಧನ್ಯರು ಯಾರಿನ್ನ ?

೭

ಧಾನ್ಯದ ಕೋಟಿ
ಜಗದಲಿ ಹುಟ್ಟಿ
ಸೆಟ್ಟಿಯ ಹೊಟ್ಟೆಗೆ ಆಧಾರ !
ರೈತನ ಹೊಟ್ಟೆ ನಿರಾಧಾರ !!

೮

ಬಡವನು ಬಿದ್ದಾ
ಒಡೆಯನು ಗೆದ್ದಾ

ಹಸಿವೆಯ ಭೀಕರ ರಣದಲ್ಲಿ !
ತ್ರಾಣವು ಪ್ರಾಣವು ಧನದಲ್ಲಿ !!

೯

'ನ್ಯಾಯವು' ಸುಳ್ಳು,
ಬಾಯಿಗೆ ಮುಳ್ಳು !
ಸುಮ್ಮನೆ ಗುಲ್ಲೊ ಬೊಬ್ಬಾಟಾ
ನೀತಿಯ ಹೆಸರಲಿ ಕೂಗಾಟಾ !

೧೦

'ಶಾಂತಿಯ ರಕ್ಷಕ'
ಅನ್ನುತ ಭಕ್ಷಕ
ರಾಕ್ಷಸನಾಗಿಯೆ ಸಂಹಾರ !
ಲೋಕಕೆ ಇಲ್ಲಾ ಆಹಾರ !

---

# ನಾನು

ಅಡವಿಯಲಿ ನಾನಿಲ್ಲ;
ಗುಡಿಯಲ್ಲಿ ನಾನಿಲ್ಲ;
ಗಿಡದಡಿಯ ಕರಿಗಲ್ಲು ನಾನಲ್ಲವು.
ಅಡಿಗಡಿಗೆ ನಾನಿರುವೆ,
ಪೊಡವಿಯಲಿ ತುಂಬಿರುವೆ,
ಹುಡುಕಿ ತೆಗೆ; ನಾನೆಲ್ಲಿ ? ಭಕುತಿಯಲ್ಲಿ !

ಧನಕನಕ ಬೇಕಿಲ್ಲ;
ವನಮಾಲೆ ಬೇಕಿಲ್ಲ;
ನನಗೇಕೆ ಹಣ್ಣುಗಳು? ಹೂಗಳೇಕೋ?
ನನಗೇಕೆ ನೊರೆ ಹಾಲು?
ದನದ ಕರು ಸೇವಿಸಲಿ,
ನನಗಿರಲಿ ನಿರ್ಮಲಾಂತಃಕಣರವು

—

# ಕನಸಿನಲ್ಲಿಯು ಕಂದ

ಕಿರಿಯ ಮುದ್ದಿನ ಕಂದನೊಬ್ಬನು
ಮನೆಯ ಒಳಗಿಂದೋಡುತ
ಹೊರಗೆ ಮನೆಯಂಗಳದಿ ಚೆಂದದಿ
ಬಂದು ನಿಂದನು ನೋಡುತ

ಗೆಜ್ಜೆ ಸರಪದು ಕಾಲೊಳಿಲ್ಲವು,
ಅಂಗಿಯಿಲ್ಲವು, ಬತ್ತಲೆ;
ಸಣ್ಣ ಗೊಂಬೆಯು ಬಣ್ಣ ಬುಗುರಿಯು
ಬಿದ್ದು ಇದ್ದವು ಸುತ್ತಲೆ

ಮಣ್ಣಗೊಂಬೆಯನೆತ್ತಿಕೊಂಡನು
ಬಣ್ಣ ಬುಗುರಿಯ ನೋಡುತ;
ಜೊಲ್ಲ ಸುರಿಯುತ ತೊದಲಿ ನುಡಿಯುತ
ಕಾಲ ಕಳೆದನು ಆಡುತ

ನೆಲದ ಮೇಲಿನ ಅಂಗಿಯೊಂದನು
ಎತ್ತಿ ಹೆಗಲಲಿ ಹೊತ್ತನು;
ಮಾತು ಬಾರದ ಕಿರಿಯ ಕಂದನು
ತೊಟ್ಟು ಕೊಳ್ಳಲು ಅರಿಯನು

ಪದವನೊಂದನು ಹಾಡುತಿದ್ದನು,
ಸ್ವರವು ಇಂಪಾಗಿದ್ದಿತು;
ಕಪನಸದರ್ಥವು ನನಗೆ ಬಾರದು
ಕಂದಗೂ ಸಹ ತಿಳಿಯದು !

ಜಗವು ಮರೆಯಾಗಿತ್ತು ಕಂದಗೆ
ಆಟವಾಡುವ ಭರದಲಿ;
ಬುಗುರಿಯೊಂದೇ ಗೊಂಬೆಯೊಂದೇ
ಅವನ ದೃಷ್ಟಿಯು ಪಥದಲಿ

ಹತ್ತು ಕ್ಷಣಗಳು ಕಳೆಯಲಿಲ್ಲವು
ಕಂದ ಹಸಿವಿಂ ಬಾಡಿದ;
ಮಣ್ಣ ಗೊಂಬೆಯ ಬಣ್ಣ ಬುಗುರಿಯ
ಸೆಳೆದು ಮನೆಯೊಳಗೋಡಿದ

ಬಂದ ಹಾಗೆಯೆ ಕಂದ ಸಾಗಿದ
ಹೆಗಲ ಅಂಗಿಯು ಹಾರಿತು;
ಬೆಳ್ಳಿ-ಗೆಜ್ಜೆಯು ಕಾಲೊಳಿಲ್ಲವು
ಆಟದಲಿ ಅದು ಜಾರಿತು

ಮನೆಯ ಬಾಗಿಲ ಬಳಿಯೆ ತಾಯಿಯು
ಮಗನ ನೋಡುತಲಿದ್ದಳು;
ದಣಿದ ಬಾಲಕನಪ್ಪಿಕೊಂಡಳು,
"ಕಂದ ಕಿರಿಯನು" ಅಂದಳು

"ಮುದ್ದಿನಾಮಣಿ, ಸದ್ಗುಣದ ಕಣಿ,
ಆಟವಾಡುವ ಭರದಲಿ;
ನನ್ನ ಮರೆತರು ಕೊನೆಗೆ ಮರೆತನೆ?"
ನುಡಿದಳಾತ್ಮಿಕ ಸ್ವರದಲಿ

ಧನ್ಯ ಮಗು ತಾಯ್–ತೊಡೆಯ ಮಧ್ಯದಿ
ಗಾಡ ನಿದ್ದೆಯೊಳಿದ್ದಿತು,
ಪುಣ್ಯ ದಿವ್ಯಾನಂದ ಶರಧಿಯ
ತೆರೆಯ ಮೇಲದು ತೇಲಿತು

\+ + + +

ಕನಸು ತೀರಿತು, ಕಣ್ಣ ತೆರೆದೆನು,
ಕಂಡ ನೋಟಕೆ ಬಿಗ್ಗಿದೆ;
"ನಿನ್ನ ಕಂದನು ನಾನು ದೇವಾ"
ಎಂದು ಶಿರವನು ಬಗ್ಗಿದೆ

---

# ಇಂತಿರಲಿ ನನ್ನ ಬಾಳು

ಮಲ್ಲಿಗೆಯು ಸೌರಭದ ಸಾಗರದಿ ಮುಳುಗಿರಲಿ;
ಹುಲ್ಲಿಸಳು ಮಂಜು ಹಸಿಗಾಶ್ರಯದ ಕೊಡುತಿರಲಿ;
ಕಲ್ಲು ಕಲ್ಲಾಗಿರದೆ ಶಿಲ್ಪಿಗನ ಮಗುವಾಗಿ
ನಗುವುದನು ಕಲಿಸುತಿರಲಿ

ಕಡಲ ತೆರೆ ಹಿಂದಿರದೆ ಮುಂದೆ ಸಾಗುತ ಬರಲಿ;
ಕಡಲಡಿಯ ಮೌಕ್ತಿಕವು ಜನನ ಕೋರದೆಯಿರಲಿ;
ಕಡು ಬಡವ ಬಲು ಕಿರಿಯ ತಾನೆಂದು ಜಲಬಿಂದು
ಮನಸಿನಲಿ ಕೊರಗದಿರಲಿ

ಕೋಗಿಲೆಯು ಶ್ರೀಹರಿಯ ಪದವ ಪಾಡುತಲಿರಲಿ;
ಸೋಗೆ ಪಸರಿಸಿ ನವಿಲು ಹಾಡ ಕೇಳುತಲಿರಲಿ;
ಆಗಸವನೇರಿದರು ಕೆಳಗಿರುವ ಜಲದಲ್ಲಿ
ತಾರೆ ತಾ ತೋರುತಿರಲಿ

ಹೊಳೆಯ ಹೊನಲಿನ ತೆರದೊಳುತ್ಸಾಹ ಸಾಗಿರಲಿ;
ಹೊಳೆಗೆ ಕಡಲನು ಕೂಡುವಾಸೆ ದೃಢವಾಗಿರಲಿ;
ಕಡಲ ತೆರೆ ತಾಯ್ನಾಡ ಪದವ ತೊಳೆಯುತಲಿರಲಿ;
ಇಂತಿರಲಿ ನನ್ನ ಬಾಳು.

---

# ನೀಲಿಯ ಕೋಳಿಗಳು

ಕನ್ನಡ ಹಾಡಿನ ಕಡಲಿನ ಹತ್ತಿರ
    ಮೆರೆವುದು ಸೊಬಗಿನ ಮಾವಳ್ಳಿ;
ಹಳ್ಳಿಯ ಸುತ್ತಲು ತೆಂಗಿನ ನೋಟವು
    ಅಡಿಕೆಯ ಮರದಲಿ ಎಲೆಬಳ್ಳಿ

ಬೆಳ್ಳಗೆ ಕೂದಲ ತೆಳ್ಳಗೆ ದೇಹದ
    ಮುದುಕನು ತಿಮ್ಮನು ಹಳ್ಳಿಯಲಿ
ಹೆಂಡತಿಯೊಂದಿಗೆ ಸುಖದೊಳಗಿದ್ದನು;
    ಆಕೆಗೆ ಹೆಸರಿದ್ದಿತು ನೀಲಿ

ಬೇಸರವಿಲ್ಲದೆ ದುಡಿಯುವಳಾಕೆಯು
    ಮುದುಕನ ಮೇಲತಿಶಯ ಪ್ರೀತಿ;
ಬಾಳಿನ ಸಾಗರ ದಾಟಲು ನೀಲಿಯು
    ತಿಮ್ಮನ ಜೀವನದಾ ಜ್ಯೋತಿ

ತಿಮ್ಮನು ಗುಣಯುತ ಗಂಡನು ಆದರು
    ಕೆಲಸವ ಮಾಡನು ಮೈಗಳ್ಳ;
ಒಪ್ಪತು ದುಡಿದರೆ ಇಪ್ಪತು ದಿನಗಳ
    ವರೆಗೂ ಕೆಲಸವನವನೊಲ್ಲ

ಕೋಳಿಯ ಮರಿಗಳ ಸಾಕುವದೆಂದರೆ
    ನೀಲಿಗೆ ಎಳೆ ಪ್ರಾಯದ ಕನಸು,
ಸಾಕಿದ ಮರಿಗಳು ಕೋ ಕೋ ಕೂಗಲು
    ಹಿಗ್ಗುವದಾಕೆಯ ಮುದಿ ಮನಸು

ಮುದುಕಿಯು ಸಾಕಿದ ಕೋಳಿಯ ಸಂಖ್ಯೆಯು
ಒಂದೆರಡಲ್ಲಾ; ಮೂವತ್ತು;
ಅವುಗಳ ಸುತ್ತಲು ಸುಳಿ ಸುಳಿದಾಡುವ
ಮರಿಗಳ ಸಂಖ್ಯೆಯು ತೊಂಬತ್ತು

ಕೋಳಿಗಳೆಂದರೆ ಮುದುಕಿಯ ಪ್ರಾಣ
ಮಗನೂ ಮೊಮ್ಮಗನೂ ಎಲ್ಲಾ !
ಕೋಳಿಯ ಹಿಂಡೇ ನೀಲಿಯ ಬಳಗ,
ಆಕೆಗೆ ಮಕ್ಕಳು ಇರಲಿಲ್ಲಾ

ಹಳ್ಳಿಯ ಬೀರೇ ದೇವರ ಹೆಸರಲಿ
ವರುಷಕೆ ಮೂರೇ ಮರಿಗಳನು
ಆಹುತಿಗೈಯೆ ಪ್ರಸಾದವ ತಿಮ್ಮನು,
ನೀಲಿಯ ಸಂಗಡ ತಿನ್ನುವನು

ವರುಷಕೆ ಮೂರೇ ಕೋಳಿಗಳೆಂದರೆ
ತಿಮ್ಮನ ಮನದಲಿ ಕಡು ಕೋಪ
ಮನೆಯಲಿ ನೂರಾರಿದ್ದೂ ತಿನ್ನಲು
ಸಿಗದಿರೆ ಉರದಲಿ ಉರಿ ತಾಪ

ನೀಲಿಗೆ ಪರಿ ಪರಿ ಹೇಳಿದರೇನೈ?
ಕೋಳಿಯ ಮರಿಗಳ ಕೊಲ್ಲುವಳೇ ?
ಎಷ್ಟೊ ಹೇಳಿದರಷ್ಟೇ ಮುದುಕಿಗೆ
ಹಟದೊಳಗಾಕೆಯು ಗೆಲ್ಲುವಳೇ

ಕೋಳಿಯ ಮುಕ್ಕುವ ಯುಕ್ತಿಯನೊಂದನು
ಯೋಚಿಸಬೇಕೆಂದನು ತಿಮ್ಮಾ-
'ಊರಲಿ ಮಾದೇವಿಯು ಸುರುವಾಗಿವೆ
ನೆರವಾಗವ್ವಾ ಮಾರಮ್ಮಾ'

## ನೀಲಿಯು ಕೋಳಿಗಳು

ಮರುದಿನ ತಿಮ್ಮನು ನೀಲಿಗೆ ಹೇಳಿದ:—
ಊರಲಿ ಮಾದೇವಿಯು ಬಂದು
ವಾರೆರಡಾದರು ನಾನೂ ನೀನೂ
ಕಾಣಿಕೆ ಸಲ್ಲಿಸಲಿಲ್ಲೆಂದು

ಮಾರಿಯು ಬಂಟನು ನಿನ್ನೆಯ ರಾತ್ರಿಗೆ
ಕನಸಿನೊಳೆನ್ನೆದುರಿಗೆ ಬಂದು,
"ತಿಮ್ಮಾ ಕಾಣಿಕೆ ಸಲ್ಲಿಸು" ಅಂದನು;
ಹೆದರಿದೆ ನಾ ಬೆವರಲಿ ಮಿಂದು

"ನಿನ್ನಾ ಪ್ರೀತಿಯು ಕಾಣಿಕೆ ಯಾವುದು ?
ಹೇಳೈ ಸಲ್ಲಿಸುವೆನು ತಂದೆ,
ಮಾರಿಯ ಬಂಟನೆ, ಬಡವರ ನೆಂಟನೆ,
ರಕ್ಷಿಸು ತಪ್ಪಾಯಿತು;" ಅಂದೆ

"ಪ್ರತಿ ಶನಿವಾರಕೆ ಬೇಯಿಸಿ ಕೋಳಿಯ
ಮರಿಯೊಂದನು ಕೊಟ್ಟರೆ ತೃಪ್ತಿ;
ಕೋಳಿಯ ಬಳಗವು ಬೆಳೆಯಲಿ ತಿಮ್ಮಾ,
ತೋರಲಿ ದಂಪತಿಗಳ ಭಕ್ತಿ

ಮಾರಿಯ ಮಂದಿರದಾಚೆಗೆ ತೋರುವ
ಹಲಸಿನ ಮರದಾ ಹೊದರಿನಲಿ
ನನ್ನಾವಾಸವು; ಕೋಳಿಯ ಮರಿಯನು
ತಂದರ್ಪಿಸುವುದು ಪೊಳ್ಳಿನಲಿ"

ಕನಸಿನ ಕತೆಯನು ಕೇಳಲು ನೀಲಿಯ
ಮೈಯೊಳಗೆದ್ದವು ಮುಳ್ಳುಗಳು;
ದೇಹವು ನಡುಗಿತು, ಬೆವ್ಹರನಿ ಮೂಡಿತು,
ಕಟಕಟವೆಂದವು ಹಲ್ಲುಗಳು

ಮರು ದಿನ ಶನಿವಾರದ ರವಿ ಮೂಡಿರೆ
ಕೋಳಿಯ ಮರಿ ಕೊಲ್ಲುವುದೆಂದು
ನೀಲಿಯ ಅಪ್ಪಣೆಯಾಗಲು ತಿಮ್ಮನು
ಕೊಂದನು ಮರಿ ದೇವರಿಗೆಂದು

ಬೇಯಿಸಿ ಮರಿಗೆ ಮಸಾಲೆಯ ಹಾಕಲು
ಗಮ ಗಮ ವಾಸನೆ ಮನೆಯಲ್ಲಿ;
ತಿಮ್ಮನ ಬಾಯಲಿ ಸುರಿಯಿತು ನೀರು
ಸಂತಸವುಕ್ಕಿತು ಮನದಲ್ಲಿ

“ನೀನೇ ಕಾಣಿಕೆ ಸಲ್ಲಿಸು ನೀಲೀ,
ಹೋಗುವೆ ನಾ ಗದ್ದೆಯ ಕಡೆಗೆ”
ಅನ್ನುತ ತಿಮ್ಮನು ಮನೆಯಿಂದೆದ್ದನು
ಅಡಗಿದ ಹಲಸಿನ ಹೊದರೊಳಗೆ

ಮುದುಕಿಯು ಮಾಂಸದ ಮುದ್ದೆಯ ಹಿಡಿದು
ಬೀರೇ ದೇವಗೆ ಋಣಿಯಾಗಿ
ಹಲಸಿನ ಹೊದರಲಿ ತೂರಿದಳಯ್ಯಾ
ಭಕ್ತಿಯ ಮುಕ್ತಿಯು ಕಣಿಯಾಗಿ

ಮರದೊಳಗಡಗಿದ ತಿಮ್ಮನು ಪಡೆದನು
ಎಂದೂ ತೋರದ ಆನಂದ;
ಗಮ ಗಮ ವಾಸನೆಯಿಂದಲಿ ತುಂಬಿದ
ಮಾಂಸವ ಗಪಗಪನೇ ತಿಂದ

ಕಪಟವನರಿಯದೆ ಕೋಳಿಯ ಕೊಟ್ಟಳು
ನೀಲಿಯು ವಾರಕೆ ಒಂದು ದಿನ;
ತಪ್ಪದೆ ತಿಮ್ಮನು ಬಲು ರುಚಿಯಿಂದಲಿ
ಕೋಳಿಯ ತಿಂದನು ಬಿದ್ದ ಕ್ಷಣ

ನಾಕ್ಕೈದಾರನು ಮರಿಗಳ ತಿಂದನು
ತಿಮ್ಮಣ್ಣ ದೇವರ ಹೆಸರಿನಲಿ !
ಏಳನೆ ಬಾರಿಗೆ ದೇವರ ದರುಶನ-
ದಾಸೆಯು ಮೂಡಿತು ನೀಲಿಯಲಿ

ಏಳನೆ ಮರಿ ಕಾಣಿಕೆ ಕೊಡುವಾಗಲಿ
ದೇವರ ದರುಶನದಾಸೆಯಲಿ
ಮರದಲಿ ನೋಡಿದಳಾಕೆಯು ! ಅಯ್ಯೋ!
ಗಂಡನ ಕಂಡಳು ಹೊದರಿನಲಿ !!

ಕಿಡಿಕಿಡಿಯಾದಳು; ತಿಮ್ಮಣ್ಣ ನುಡಿದನು:
'ನಾನೇ ಮಾರಮ್ಮನ ಬಂಟ!
ಕೋಳಿಯ ಮಾಂಸವ ತಿನ್ನಲು ಬಂದಾ
ದೇವಿಯು ಮನೆಯೊಳಗಿನ ನೆಂಟ'

---

# ಹರಿಜನರು

೧ಆಗೆರ ಸೋಮೂ
ಮುಕ್ರೀ ಓಮೂ
ಹಳ್ಳೆರ ಖೇಮೂ ಹರಿಜನರೋ;
ಹಗಲೂ ಇರುಳೂ
ಬೆಳಗೂ ಬೈಗೂ
ದುಡಿದೂ ಹೊಟ್ಟೆಗೆ ಸಿಗದವರೋ !

ಬಿಸಿಲಲಿ ಬೆಂದು
ಬೆವರಲಿ ಮಿಂದು
ಭೂಮಿಗೆ ಕಳೆಯನು ತಂದವರೊ;
'ಬರಿದೋ ಹೊಟ್ಟೆ
ಪೆಟ್ಟಿಯಲಿ ಬಟ್ಟೆ
ಇಲ್ಲದೆ ಕೆಟ್ಟೆ' ಎಂಬುವರೋ !

ಮಳೆಗಾಲ್ ಬಂತು,
ಕೆಲಸಾ ಸಂತು,
ದುಡಿಸುವರಿಲ್ಲಾ; ಜರ್‌ಜರರೋ !
ಸರಕಾರ್ ಸುಳ್ಳು,
ಜನರಿಗೆ ಮುಳ್ಳು
ಬಡವರಂದಲ್ಲಾ, ಒಡೆಯರದೋ !

---

೧ 'ಆಗೆರ', 'ಮುಕ್ರೀ' ಮತ್ತು 'ಹಳ್ಳೆರ' ಇವು ಹರಿಜನ ಜಾತಿಯ ಹೆಸರುಗಳು; ಉತ್ತರ ಕನ್ನಡದಲ್ಲಿ ಬಳಕೆಯಲ್ಲಿವೆ.

ಗುಡಿಸಲು ಸಣ್ಣಾ;
ತೊಯ್ದಿದೆ ಮಣ್ಣಾ,
ಸೋರುವದಣ್ಣಾ, ಅಲ್ಲಲ್ಲಿ!
ಮಡಕೆಯು ತುಂಡು;
ಸುತ್ತುವ ಮುಂಡು
ಜರಿಜರಿಯಾಗಿದೆ ಅಲ್ಲಲ್ಲಿ!

ಮದುವೆಯು ಬಂದರೆ
ಸಾಲವ ತಂದರೆ
ಸಾಯುವ ವರೆಗೂ ದುಡಿಸುವರೊ!
ಸತ್ತರೆ ತಂದೆ
ದುಡಿವನು ಮುಂದೆ
ಮಗ ತಾನಿದ್ದರೆ; ದಣಿಸುವರೊ!

ತೆಗೆದರೆ ದೆವ್ವ,
ಮುದುಕಿಯು ಅವ್ವ
ಬದುಕುವಳೆಂಬುದೆ ವಿಶ್ವಾಸ!
ಭಟ್ಟರ ಮಂತ್ರಾ,
ಮೋಡಿಯ ಯಂತ್ರಾ,
ದೆವ್ವದ ತಂತ್ರಾ; ಬಲು ಪಾಪಾ!

ಕೂಲಿಯ ಕೆಲಸಾ
ಇಲ್ಲದ ದಿವಸಾ
ಉರದಲಿ ತಾಪಾ ಉಪವಾಸಾ!
"ಯಾಕೋ ಕದ್ದೆ?
ಹೊಟ್ಟೆಗೆ ತಿಂದೆ?"
ಎನ್ನುವ ಜಾಣರಿಗಾವೇಶಾ

ಗುಡಿಸಲ ಭೂಮಿ
ಒಡೆಯುದು ಸ್ವಾಮಿ;
ಅಡಿಯಷ್ಟೂ ನೆಲ ನಮಗಿಲ್ಲಾ!
ಇಲ್ಲಾ ಗದ್ದೆ;
ಇರುವುದು ಹುದ್ದೆ!
'ಹರಿಜನ' ಹುದ್ದೆಯು ನಿಮಗಿಲ್ಲಾ !

ಶಿಕ್ಷಣ ಲೇದು,
ಬಾರದು ಓದು,
ಲೆಕ್ಕಾ ಪೊಕ್ಕಾ ಸಟ್ಟರಿಗೆ;
ಮಣಮಣ ಮಂತ್ರಾ
ದೇವರ ತಂತ್ರಾ
ಬರುವದು ಮಾತ್ರಾ ಭಟ್ಟರಿಗೆ !

ಸಾಲದು ತ್ರಾಣಾ !
ಹೋಗದು ಪ್ರಾಣಾ !
ಭಗವಂತನಿಗೇ ಅರ್ಪಣವೋ ?
ಬಡ ಕಂಗಾಲನ
ಹರಿಜನ-ಜೀವನ
'ನ್ಯಾಯ ನೀತಿ'ಗಳ ದರ್ಪಣವೋ ?

ಬಂತು ಸ್ವರಾಜ್ಯಾ,
ಆದರು ಭಾಗ್ಯಾ
ಹರಿಜನಕಿಲ್ಲಾ, ನಿರ್ಬಲರೋ;
ಹರನೂ ನೋಡಾ !
ಹರಿಗೂ ಬೇಡಾ!
ಹೆಸರಿಗೆ ಮಾತ್ರಾ ''ಹರಿಜನ"ರೋ !

---

# ಮೈಸೂರು

ಬಂಧುರ ಭೂಪದ;
ಸುಂದರ ಶಿಲ್ಪದ
ಮಂಗಳ ಮಂದಿರ ಮೈಸೂರು
ಮಿಂಚಿನ ದೀಪವು
ಕಂಗೊಳಿಸಲು, ಮನ
ರಂಜಿಪ ಜನಪದ ಮೈಸೂರು

ಕನ್ನಡ ಧರೆಯಲಿ
ಚಿನ್ನವು ದೊರಕುವ
ಚೆನ್ನೆಯ ಖನಿಯಿದು ಮೈಸೂರು
ಸಣ್ಣಗೆ ತೊದಲುವ
ಕನ್ನಡ ಮಕ್ಕಳ
ಬಣ್ಣದ ಬೀಡಿದು ಮೈಸೂರು

ಊಣೆಯನರಿಯದ
ವೀಣೆಯ ಬೆಡಗಿನ
ಗಾನದ ಗುಡಿಯಿದು ಮೈಸೂರು
ಆನೆಗಳಿರುತಿಹ
ಕಾನನದಿಂದಲಿ
ಕ್ಷೋಣಿಯೊಳೆಸೆವುದು ಮೈಸೂರು

ಬತ್ತದ ಕೊಳಗಳು
ಸುತ್ತಲು ಹೊಲಗಳು
ಎತ್ತರ ಭೂತಲ ಮೈಸೂರು

ಮುರಲಿಯನೂದುತ
ತರಳರು ದನಗಳ
ಕರೆಯುವ ಬೀಡಿದು ಮೈಸೂರು

ಗಂಧದ ಮರದಡಿ
ಕಂದರು ಕುಣಿಯುವ
ಅಂದದ ಬನವಿದು ಮೈಸೂರು
ಕುಂದದೆ ಬೆಳಕಿನ
ಚಂದಿರ ಮೂಡಲು,
ಮುಂದಕೆ ನಡೆವುದು ಮೈಸೂರು

---

# ನೆರಳು

ಆಸೆಯೆಂಬುದು ನೆರಳು,
ಹಿಂದುಮುಂದಿನ ಮರುಳು,
ಎಲ್ಲಿ ಹೋದರು ಬಿಡದು ಭೂತದಂತೆ;
ಚಿಕ್ಕದಾದರು ಬೆರಳು,
ಮುಂಜಾವದಲಿ ನೆರಳು
ಬೆರಳಿಗಿಂತಲು ಬಹಳ ದೀರ್ಘವಂತೆ !

ಮರಳಿ ಸಂಜೆಗೆ ಛಾಯೆ
ದೀರ್ಘವಾಯಿತು, ಮಾಯೆ !
ಈ ರೀತಿ ಮಾನವನ ಮನದ ಚಿಂತೆ!
ಮೊದಲು ಬಾಳುವ ಚಿಂತೆ,
ಕೊನೆಗೆ ಮರಣದ ಚಿಂತೆ,
ತುದಿಮೊದಲು ಹಿರಿ ಚಿಂತೆ ನೆರಳಿನಂತೆ !

———

# ಅಂಚೆಯವನು

ಓಲೆಯ ಹಂಚಲು ಹೊರಡುವೆ ನಾನು
ತೋರಲು ಆಗಸದಲಿ ಬಳಿ ಭಾನು;
ಮನೆಯಲಿ ನೀವು ಬಿಸಿಲಲಿ ನಾನು.
ಕಾಗದ ಬಂತು ಕಾಗದವು

ಹೆಗಲಲಿ ಹಳದಿಯ ಹಸುಬೆಯ ನೀಡಿ
ಕಾಲಲಿ ಚರ್ಮದ ಮೆಟ್ಟಿನ ಜೋಡಿ;
ತಲೆಯಲಿ ಖಾಕಿಯ ಪಗಡಿಯ ಸೋಡಿ;
ಓಲೆಯ ತಂದೆ ಓಲೆಯನು

ಒಳಗಿಂದಲಿ ಜನರೆನ್ನನು ಕಂಡು
ಬೇಗನೆ ಹೊರ–ಅಂಗಳಕೈತಂದು
'ಕಾಗದವಿದೆಯೇ?' ಅನ್ನುವುದುಂಟು !
ಕಾಗದ ಬಂತು ಕಾಗದವು

ಸೊಗಸಿನ ಸುದ್ದಿಯ ತರುವೆನು ನಿಮಗೆ;
ವ್ಯಸನದ ವಾರ್ತೆಯ ಕೊಡುವೆನು ತಮಗೆ
ಎಲ್ಲಾ ಸುದ್ದಿಗಳೊಂದೇ ನಮಗೆ!
ಓಲೆಯ ತಂದೆ ಓಲೆಯನು

ಇದು ಧನಹೀನರ, ಇದು ಹಣವಂತರ,
ಇದು ಗುಣಹೀನರ, ಇದು ಗುಣವಂತರ,
ಕಾಗದವೆನ್ನುತ ಮಾಡೆನು ಅಂತರ!
ಕಾಗದ ಬಂತು ಕಾಗದವು

ಅಂಚೆಯವನು

‘ಗಂಡನು ನಾಳೆಗೆ ಬರುವನು’ ಎಂದು,
‘ಅಯ್ಯೋ ಹೆಂಡತಿ ತೀರಿದಳೆ’ಂದು,
ಹಿಗ್ಗುವ ತಗ್ಗುವ ಮೂಢರಿಗೆಂದು
ಓಲೆಯು ತಂದೆ ಓಲೆಯನು

ಓಲೆಯ ಕೊಡುವಧಿಕಾರಿಯು ನಾನು,
ಆದರು ಅದರಲಿ ಬರೆದುದು ಏನು ?
ಎಂಬುದನರಿಯನು ! ಬಲು ಸುಖಿ ನಾನು !
ಕಾಗದ ಬಂತು ಕಾಗದವು.

---

## ಕಳ್ಳಾ ಮಳ್ಳಾ!

ಯಾರಿಗು ಕಾಣದೆ ಅಡಗಿಸಿ ತಿಂಡಿಯ
    ಮುಕ್ಕುವೆಯೇತಕೆ ನೀ ಕಳ್ಳಾ ?
ಅಜ್ಜಿಯು ತೇಗುತೆ ಮಜ್ಜಿಗೆ ಕುಡಿಯಲು
    ಏತಕೆ ನಗುವಿಯೊ ನೀ ಮಳ್ಳಾ ?

ಅಕ್ಕಗೆ ಅಪ್ಪನು ಬಿಮ್ಮನೆ ಬೈದರೆ
    ಕುಣಿಯುವದೇತಕೆ ನೀ ಕಳ್ಳಾ?
ತಂಗಿಯು ದೊಪ್ಪನೆ ಬಿದ್ದರೆ, ಎತ್ತದೆ
    ಸುಮ್ಮನೆ ನೋಡುವೆ ನೀ ಮಳ್ಳಾ !

ಖರ್ಜೂರ ಹಿಡಿಯುಂದಕ್ಕನ ಬಾಯಲಿ
    ಹುಣಸೆಯ ಹಾಕುವೆ ನೀ ಕಳ್ಳಾ !
ಬಾಳೆಯ ಹಣ್ಣಿನ ಸಿಪ್ಪೆಯನೀಯುತ
    ಹಣ್ಣಂದೊರೆಯುವೆ ನೀ ಮಳ್ಳಾ !

ಅಜ್ಜಿಯು ಮಲಗಲು ಆಕೆಯ ಕಾಲಿಗೆ
    ಗೆಜ್ಜೆಯ ಸುತ್ತುವೆ ನೀ ಕಳ್ಳಾ !
ಅಜ್ಜನ ಹಿಂಬದಿ ಆತನ ಜುಟ್ಟಿಗೆ
    ಕಾಗದ ಕಟ್ಟುವೆ ನೀ ಮಳ್ಳಾ !

ಈ ಬಗೆ ಮಕ್ಕಳು ಮನೆಯಲಿ ಇದ್ದರೆ
    ಏನೇ ಬಡವಿಯ ನನ ಭಾಗ್ಯಾ !
ತಾಯಿಯ ಕಣ್ಣಿಗೆ ಮುದ್ದಿನ ಕಂದನು
    ಆಡುವ ನಾಟಕ ಅತಿ ಯೋಗ್ಯಾ !

———

# ತಾಯಿ

ತೂಗುವ ತೊಟ್ಟಿಲು ದೇಗುಲ, ತಾಯಿ,
ಜೋಗುಳ ವೇದಮನೋಹರ, ಮಾಯಿ

ಕೈಯಲಿ ಪಗ್ಗವು, ಬಾಯಲಿ ಹಾಡು,
ಹೃದಯವು ಮಮತೆಯ ಸಮತೆಯ ಬೀಡು

ಮಲಗು ಮುಕುಂದಾ, ಗೋಪಿಯ ಕಂದಾ,
ಮಲಯಜ ಗಂಧಾ, ಹೂಮಕರಂದಾ

ಝುರಿಯೋ ಹರಿಯಲು ಜೋಗುಳವಾಡು
ಮರೆವುದು ಧರೆಯಲಿ ನಾಕವು, ನೋಡು

ತಾಯಿಯು ದೇವರಿಗಿಂತಲು ಮೇಲು,
ದೇವರ ಮೊಲೆಯಲಿ ದೊರೆವುದೆ ಹಾಲು?

ವಿಶ್ವದ ಬಾಳಿನ ಮೂಲವದೆಲ್ಲಿ
ಮಾತೆಯ ಪಾಲನೆ ಲಾಲನೆಯಲ್ಲಿ

ಯಾವಳ ಹಿಡಿಯಲಿ ತೊಟ್ಟಿಲ ದಾರ
ಆಕೆಯ ಉಡಿಯಲಿ ಜಗದೋದ್ಧಾರ

ತೂಗುವ ತೊಟ್ಟಿಲು ದೇಗುಲ, ತಾಯಿ,
ಜೋಗುಳ ವೇದಮನೋಹರ, ಮಾಯಿ

---

# ಗೊಲ್ಲನ ಬಾಳು

‘ಮುಂದಿನ ಜನ್ಮದಿ ಬೃಂದಾವನದಲಿ
ನಿನ್ನನು ಗೊಲ್ಲನ ಮಾಡುವೆನು’
ಎಂದೀ ವರವನು ವಿಧಿಯನಗಿತ್ತರೆ
ಇಂದೇ ಸಾಯಲು ಬಯಸುವೆನು !

ಬೃಂದಾವನದೊಳು ಗೊಲ್ಲನ ಮಾಡಲು
ಗೋವುಗಳನು ನಾ ಕಾಯುವೆನು;
ಮುರಲಿಯನೂದುತ ಆಲದ ನೆರಳಲಿ
ಬನಗಳ ಗೀತವ ಹಾಡುವೆನು

ಪಂಡಿತ ಕವಿಗಳು ವ್ಯಾಕರಣದ ಬಲ್—
ಬಲೆಯಲಿ ಬಗಿದಿಹ ಕವಿತೆಗಳ,
ಜನರಿಗೆ ತಿಳಿಯದ ಸಕ್ಕದ ನುಡಿಯಲಿ
ಸೆರೆಯಾಗಿರುವಾ ಗೀತಗಳ—

ಇವುಗಳನೋದಿ ನನ್ನೀ ಜನ್ಮವು
ಸಂಸ್ಕೃತವಾಗಿದೆ ಹೇ ದೇವ !
ಜೀವವು ಇಲ್ಲದ ಸಂಸ್ಕೃತಿಯೇತಕೆ ?
ಬೇಕಾಗಿರುವದು ನಿಜ ಜೀವ

ಗೊಲ್ಲರು ಊದುವ ಕೊಳಲಿನ ದನಿಯಲಿ
ಜೀವವು ನಲಿನಲಿದಾಡುವದು !
ದನಗಳ ಬಾಯಿಯ ‘ ಅಂಬಾ ಅಂಬಾ ’
ಎಂಬಾ ಗೀತೆಯೊಳಲೆಯುವದು !

## ಗೊಲ್ಲನ ಬಾಳು

ದನಗಳ ಕಾದು ಹಾಲನು ಕುಡಿದು,
ಕಂಬಳಿಯಲಿ ನಾ ಮಲಗುವೆನು
ನೀಲಿಯ ನಭವೇ ಮನೆಯಾಗಿರುವುದು,
ಹಾಡುವ ಹಕ್ಕಿಯ ಕೇಳುವೆನು

‘ ಮುಂದಿನ ಜನ್ಮದಿ ಬೃಂದಾವನದಲಿ
ನಿನ್ನನು ಗೊಲ್ಲನ ಮಾಡುವೆನು ’
ಎಂದೀ ವರವನು ವಿಧಿಯನಗಿತ್ತರೆ
ಇಂದೇ ಸಾಯಲು ಬಯಸುವೆನು !

# ಕನ್ನಡ ತಾಯಿ

ಬಾಳು ಕನ್ನಡ ತಾಯಿ, ಬಾಳು ಭೂದೇವಿ,
ಗಜವೃಷಭ ಕೇತುವಿನ ಸದ್ಧರ್ಮ ದೇವಿ,

೧

ಮೂರು ಮುನ್ನೀರುಗಳ ನೀಲ ಜಲ ಮಧ್ಯದಲಿ
ಮೂರು ಸಾವಿರ ವರುಷದಾಚೆ ಜನಿಸಿ,
ಕೋಟಿ ಮಕ್ಕಳ ಹೆತ್ತು ಮುದುಕಿಯಾದರು, ತಾಯೆ,
ತರುಣಿಯೊಲು ನೀನಿರುವೆ ಚಲುವ ಸೂಸಿ

೨

ಒಂದು ಕೈಯಲಿ ಚಕ್ರ, ಒಂದು ಕೈಯಲಿ ಶೂಲ,
ಉಗ್ರ ಬೆಂಕಿಯ ಕಾರಿ ಸ್ವಾತಂತ್ರ್ಯ ಪಡೆವೆ;
ಒಂದು ಮಗ್ಗಲಿಗಾನೆ, ಒಂದು ಮಗ್ಗಲಿಗೆತ್ತು,
ಸೌಮ್ಯ ರೂಪವ ತೋರಿ ಶಾಂತಿಯನು ಕೊಡುವೆ

೩

ಅನ್ಯ ದೇಶಗಳಿಂದ ವೈರಿಗಳು ನಡೆತಂದು
ನಿನ್ನ ಧರ್ಮಾಮೃತವ ಕೆಡಿಸಲಿಕೆ ನೋಡೆ,
ಪುಣ್ಯ ಪಂಪಾತೀರದಲ್ಲಿ ರಾಜ್ಯವ ಕಟ್ಟಿ,
ಧರ್ಮವನು ಕಾಪಾಡಿ, ಕೀರ್ತಿಗೈದೆ

೪

ತೊಡಗಿ ಜಗಳಾಟದಲಿ ನಿನ್ನ ಮಕ್ಕಳು ಕೆಟ್ಟು,
ಕೆಲಕಾಲ ದಾಸ್ಯದಲಿ ಮುಳಗೆ, ನೊಂದೆ;

ಘೋರ ಗರ್ಜನೆಗೈದು, ಸಿಂಗಿಯುಂತುರಿದೆದ್ದು,
ಸ್ವಾರಾಜ್ಯ-ಫಲವನ್ನು ತಿರುಗಿ ತಂದೆ

೫

ನಿನ್ನ ಮಕ್ಕಳು ಕಡಲರಾಯನೆದೆಯನು ಸೀಳಿ,
ನಾವೆಗಳ ನಡೆಸುತ್ತ ದೂರ ಸೇರೆ,
ಗ್ರೀಕ ರೋಮನ್ ಬ್ಯಾಬಿಲೋನಿಯರ ಗಗನದಲಿ
ಮೂಡಿ ಬೆಳಗಿತು ನಿನ್ನ ಕೀರ್ತಿ-ತಾರೆ

೬

ನಿನ್ನ ದೇಹದ ಬಣ್ಣ ಕರಿಯ ದ್ರಾಕ್ಷಿಯ ಹಣ್ಣ
ಕಾಂತಿಯನು ಹೋಲುವುದು, ಎರೆ ಮಣ್ಣ ತಾಯಿ;
ನಿನ್ನ ಕೀರ್ತಿಯ ವರ್ಣ ಶುಭ್ರ ಸೂರ್ಯನ ಕಿರಣ
ತೇಜಕೆಣೆಯಾಗಿಹುದು ಸಂಸ್ಕೃತಿಯ ದೇವಿ !

---

# ಕೆಂಪು ಬಾವುಟ*

ಕೆಂಪು ಬಾವುಟವು ರೈತನದೋ । ಈ ।
ರಕ್ತಬಾವುಟವು ಕೂಲಿಯದೋ ||ಪಲ್ಲ||

ಬಡವರ ಉರದಲಿ ಹಸಿವೆಯ ಸುಣ್ಣ
ಉರಿದೂ ಉರಿದೂ ಉರಿದೂ ಹುಣ್ಣ;
ಹುಣ್ಣಿನ ನೆತ್ತರು ಧ್ವಜಕದು ಬಣ್ಣ!
ಕೆಂಪು ಬಾವುಟವು .... .... .... || ೧ ||

ರೈತನಿಂದಲೇ ಜಗದಲಿ ಅನ್ನ
ರೈತನ ಹೊಟ್ಟೆಯು ತುಂಬುವ ಮುನ್ನ
ಕೊಡಲಾಗದು ಯಾರಿಗು ಬೆಳೆಯನ್ನ!
ಕೆಂಪು ಬಾವುಟವು .... .... .... || ೨ ||

ಕೂಲಿಯಿಂದಲೇ ಜಗಗಲಿ ಕರ್ಮ;
ಶ್ರಮಜೀವನವೇ ವಿಶ್ವದ ಮರ್ಮ;
ಕೂಲಿಯ ಸುಖವೇ ಮಾನವ ಧರ್ಮ!
ಕೆಂಪು ಬಾವುಟವು.... .... .... || ೩ ||

ರೈತನಂತೆಯೇ ಬೆವರಲಿ ತೇಲಿ
ಕಾರಖಾನೆಯಲಿ ದುಡಿವನು ಕೂಲಿ;
ಪ್ರಗತಿ-ರಥಕೆ ಇವರಿಬ್ಬರು ಗಾಲಿ!
ಕೆಂಪು ಬಾವುಟವು .... .... .... || ೪ ||

---

* ಧ್ವಜದ ಮೇಲೆ ಯಾವುದೇ ತರದ ಚಿಹ್ನವಿರದ ಸಾದಾ ಕೆಂಪು ಬಾವುಟವೇ ಅಂತರ ರಾಷ್ಟ್ರೀಯ ಶ್ರಮಜೀವಿ ವರ್ಗದ ಪತಾಕೆಯೆಂದು ಹೆಸರಾಗಿದೆ. ಈ ಪತಾಕೆಯನ್ನು ಕುರಿತ ಕವನವಿದು.

ಹಾರಲಿ ಹಾರಾಡಲಿ ಈ ಧ್ವಜವು;
ಧ್ವಜದ ಕೆಳಗೆ ರೈತರ ಭುಜಬಲವು,
ಜಮೀನುದಾರಿಯ ಮರಣವು ಸಿಜವು!
ಕೆಂಪು ಬಾವುಟೆಯು .... .... .... || ೫ ||

ಕೂಲಿಕಾರ ಒಕ್ಕಲಿಗರ ಬಲವು
ಮೀನುಗಾರ ಶ್ರಮಜೀವಿಯ ಕುಲವು
ಒಂದೆಡೆ ಸೇರಲು, ಜನತೆಯ ಗೆಲವು!
ಕೆಂಪು ಬಾವುಟೆಯು .... .... ....|| ೬ ||

ಮೂಡಣ ಪಡುವಣ ಬಡಗಣ ತೆಂಕಣ
ಐದು ಖಂಡಗಳ ಶ್ರಮಜೀವಿಯ ಗಣ
ಎತ್ತಿ ಹಿಡಿದ ಧ್ವಜ ವಿಶ್ವದ ತೋರಣ!
ಕೆಂಪು ಬಾವುಟೆಯು .... .... .... || ೭ ||

ಧ್ವಜದಲಿ ಮೂಡಲು ಅನುಪಮ ಭಕ್ತಿ
ಹೊಳೆವುದು ಬೆಳೆವುದು ಜನತೆಯ ಶಕ್ತಿ;
ಇದರೊಳಗೇನೇ ಮನುಜನ ಮುಕ್ತಿ!
ಕೆಂಪು ಬಾವುಟೆಯು .... .... .... || ೮ ||

ಬಿಟ್ಟು ಬಿಡಲು ನಾವ್ ಸಂಶಯ ಭ್ರಾಂತಿ
ನಾಲ್ಕು ದಿಕ್ಕಿನಲಿ ಪಬ್ಬಿತು ಕ್ರಾಂತಿ,
ಸಮತಾವಾದದಿ ವಿಶ್ವದ ಶಾಂತಿ!
ಕೆಂಪು ಬಾವುಟೆಯು .... .... .... || ೯ ||

ಕೆಂಪು ಧ್ವಜದಲೇ ಜನತೆಯ ತ್ರಾಣಾ
ಧ್ವಜ ಬಿಡಲಾರೆವು ಹೋದರು ಪ್ರಾಣಾ!
ವೀರ ಪ್ರತಿಜ್ಞೆಯು ವೆಂಕಟರಮಣಾ!
ಕೆಂಪು ಬಾವುಟೆಯು .... .... .... ||೧೦||

---

# ಪಯಣ

ಲೋಕವಿದು ನನ್ನಾಟದಿಳೆಯೆಂದು ತಿಳಿದು
ಅದನುಳಿದು ನಿನ್ನೆಡೆಗೆ ಬರುವೆ ಹಿಗ್ಗಿ ;
ಭಾಸ್ಕರನು ಪಥದೊಳುರಿಯುವ ದೀಪವೆಂದು
ಹೆಜ್ಜೆಯಿಡುವೆನು ಮುಂದೆ ನುಗ್ಗಿ ನುಗ್ಗಿ

ನಂಬಿಗೆಯು ನನ್ನೂರುಗೋಲೆಂದು ತಿಳಿದು
ಸತ್ಯವೇ ಬುತ್ತಿ ನನಗೆಂದು ಬಗೆವೆ;
ಬರುವ ತೊಡರುಗಳೆಲ್ಲ ಧರ್ಮಛತ್ರಗಳೆಂದು
ಅವುಗಳಲಿ ನಲಿದುಂಡು ಮುಂದೆ ನಡೆವೆ

ತೃಪ್ತಿ ನನ್ನಾಯಾಸವನು ಕಳೆವ ಪತ್ನಿ,
ಪತ್ನಿಯೊಡಗೂಡಿ ನಾ ಹಿಗ್ಗಿ ತರುವೆ,
ಭಕ್ತಿನೇತ್ರಗಳಿಂದ ಮುಕ್ತಿಮಾರ್ಗವ ಹುಡುಕಿ
ಪ್ರೇಮಗೀತೆಯ ರಸವ ಕುಡಿದು ಬರುವೆ

ನಡೆವಾಗ ಚಳಿಗಾಲ ನಡುಗಿಸುವದೆಂದು
ದೇಹವಿದು ನಾ ತೊಟ್ಟ ಪಯಣ ಬಟ್ಟೆ !
ಇಂತು ಪಯಣವ ಮುಗಿಸಿ ನಿನ್ನೆಡೆಗೆ ಸೇರದಿರೆ
ಸಂಸಾರದಲಿ ನಾನು ಕೆಟ್ಟೆ ಕೆಟ್ಟೆ!!

———

# ಪ್ರಾಣಿ ಪ್ರದರ್ಶನ

ಕೋಲಿಗೆ ಕಟ್ಟಿದ ಮರ್ಕಟವು,
ಸೀಸೆಯ ಜಲದಲಿ ಕರ್ಕಟವು,
ಪಂಜರದೊಳಗಿನ ಶುಕಪಕ್ಷಿ,
ಪೇಳಿಗೆಯೊಳಗಿನ ನಾಗರವು

ಸ್ತಂಭನವಾಗಲು ಚೇತನವು
ಬಂಧನವಾಯಿತು ಜೀವನವು;
ಇದುವೇ ಪ್ರಾಣಿ ಪ್ರದರ್ಶನವು;
ಕರ್ಕಶ ನರನ ನಿದರ್ಶನವು!

ಮಂಗನ ಆಟದ ಇಂಗಿತವು?
ಕರಡಿಯ ಕುಣಿತದ ಕಾರಣವು?
ನರನ ಉದರವೇ ವಿವರಣವು!
ಮಾನವ ಜಾತಿಯ ಹಗರಣವು!

---

# ಗಡಿಯಾರ

ಗಂಟೆಯ ನೆಂಟನೆ ಓ ಗಡಿಯಾರಾ,
ಬೆಳ್ಳಿಯ ಬಣ್ಣದ ಗೋಲಾಕಾರಾ,
ವೇಳೆಯ ತಿಳಿಯಲು ನೀನಾಧಾರಾ,
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ಹಗಲೂ ಇರುಳೂ ಒಂದೇ ಬಾಳು,
ನೀನಾವಾಗಲು ದುಡಿಯುವ ಆಳು,
ಕಿವಿಯನು ಹಿಂಡಲು ನಿನಗದು ಕೂಳು
ಟಿಕ್ ಟಿಕ್ ಗೆಳೆಯಾ; ಟಿಕ್ ಟಿಕ್ ಟಿಕ್

ಮುಖವೊಂದಾದರು ದ್ವಾದಶ ನೇತ್ರ !
ಎರಡೇ ಕೈಗಳು ಏನು ವಿಚಿತ್ರ !
ಯಂತ್ರಪುರಾಣದ ರಾಕ್ಷಸ ಪುತ್ರಾ !
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ಟಿಕ್ ಟಿಕ್ ಎನ್ನುತ ಹೇಳುವೆಯೇನು?
ನಿನ್ನೀ ಮಾತಿನ ಒಳಗುಟ್ಟೇನು?
ಕಾಲವು ನಿಲ್ಲದು ಎನ್ನುವೆಯೇನು?
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ನಿನಗೆಲ್ಲಿರುವಳು ಸಖಿ ವಿಶ್ರಾಂತಿ?
ಆದರು ಮೊಗದಲಿ ಮೂಡಿದೆ ಕಾಂತಿ!
ಇದುವೇ ಕರ್ಮರಹಸ್ಯದ ಶಾಂತಿ
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ದುಡಿಯುವದೊಂದೇ ಕೂಲಿಯ ಕರ್ಮ!
ದುಡಿಸುವದೇ ಶ್ರೀಮಂತರ ಧರ್ಮ!
ಇಂತಿರುವುದು ಕಲಿಯುಗದೀ ಮರ್ಮ!
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

— —

# ಕನ್ನಡ ನಾಡಿನ ಕೊಂಕಣ

[ ಸಹ್ಯಾದ್ರಿ ಪರ್ವತಕ್ಕೂ ಅರಬೀ ಸಮುದ್ರಕ್ಕೂ ಮಧ್ಯದಲ್ಲಿ ಮೆರೆಯುವ ದಕ್ಷಿಣೋತ್ತರ ಕನ್ನಡ ಜಿಲ್ಹೆಯ ಕರಾವಳಿಯೇ ಕನ್ನಡ ನಾಡಿನ ಕೊಂಕಣ.]

ಸಗ್ಗದಿಂದ ಸೊಗದ ದೇವಿ ತಿರೆಗೆ ಬಂದಳೋ?
ಬಂದು ಮುದವ ತಂದು ಕೊಂಕಣದಲಿ ನಿಂದಳೋ?

೧

ಅಲ್ಲಿ ಇಲ್ಲಿ ಕಡಲಿನಲ್ಲಿ
ಪುಟಿಯುತಿಹುದು ನೊರೆಯ ಬಳ್ಳಿ,
ಹಸುರಿನಿಂದ ಹೊಳೆವ ಹಳ್ಳಿ,
ತೋಟದಲ್ಲಿ ಜಾಜಿ ಬಳ್ಳಿ,
ಇಂಥ ಜೋಡಿ ಇನ್ನು ಎಲ್ಲಿ?
ಸಗ್ಗದಿಂದ ಸೊಗದ ದೇವಿ ತಿರೆಗೆ ಬಂದಳೋ?
ಬಂದು ಮುದವ ತಂದು ಕೊಂಕಣದಲಿ ನಿಂದಳೋ?

೨

ಕನ್ನಡಿಗರ ಚೆನ್ನ ನಾಡು
ಕೊಂಕಣಿಗರ ತೆಂಕ ಬೀಡು
ನಾಕಲೋಕದಂಥ ಕಾಡು
ಕಾಡಿನಲ್ಲಿ ಖಗದ ಹಾಡು
ಬರದು ಇಲ್ಲಿ ಕವಿಗೆ ಕೇಡು!
ಸೊಗದ ಜೇನ ಸವಿದು ನೋಡು
ಸಗ್ಗದಿಂದ ಸೊಗದ ದೇವಿ ತಿರೆಗೆ ಬಂದಳೋ?
ಬಂದು ಮುದವ ತಂದು ಕೊಂಕಣದಲಿ ನಿಂದಳೋ?

೩

ಹಾರಿ ಹರಿವ ಝರಿಯ ನೀರು
ತುಂಗ ತೆಂಗು ಕೌಂಗು ಗೇರು
ಬಿಸಿಲೊಳೆಸೆವ ಭತ್ತ ಪೈರು
ಬೆಳೆದ ಕಬ್ಬು ಮೂರು ಪಾರು !
ನಮ್ಮ ನಾಡು ಸೊಗದ ಸಾರು
ಸುಖದ ಲತೆಯ ತಾಯಿ ಬೇರು
ಸಗ್ಗದಿಂದ ಸೊಗದ ದೇವಿ ತಿರೆಗೆ ಬಂದಳೋ ?
ಬಂದು ಮುದವ ತಂದು ಕೊಂಕಣದಲಿ ನಿಂದಳೋ ?

೨

ಮರಳಿನಂತೆ ಮೆರೆವ ಮಣ್ಣು
ಬೆಳೆವುದಿಲ್ಲಿ ಹಲಸು ಹಣ್ಣು
ಬಾಳೆಯಲೆಯೊದಳನು ಉಣ್ಣು
ಬಡಿಸಲಿಹಳು ಹರೆಯ ಹೆಣ್ಣು
ಕೊಂಕಣಿಗರ ಸರಳ ಪೆಣ್ಣು
ಕಾಂತಿಯುಗಮು ಅವಳ ಕಣ್ಣು !
ಸಗ್ಗದಿಂದ ಸೊಗದ ದೇವಿ ತಿರೆಗೆ ಬಂದಳೋ ?
ಬಂದು ಮುದವ ತಂದು ಕೊಂಕಣದಲಿ ನಿಂದಳೋ ?

೫

ಮನವ ಮರುಳಗೊಳಿಪ ಹೂವು
ಸವಿಯ ಸೊನೆಯ ಹಣ್ಣು ಮಾವು
ಬೆಳೆಯುದಿಲ್ಲಿ ಕಹಿಯ ಬೇವು !
ಬಾರದಿಲ್ಲಿ ಬಾಳ ನೋವು !
ಇಲ್ಲಿಯೊಮ್ಮೆ ಬಾಳೆ ನಾವು
ಬಳಿಕ ಬಂದರೇನು ಸಾವು ?

ಸಗ್ಗದಿಂದ ಸೊಗದ ದೇವಿ ತಿರೆಗೆ ಬಂದಳೋ?
ಬಂದು ಮುದವ ತಂದು ಕೊಂಕಣದಲಿ ನಿಂದಳೋ ?

೬

ಜಲಧಿಯೊಳಗೆ ಹೊಳೆವ ಪೆರೆಯು
ನೆಗೆದು ಜಿಗಿದು ಕುಣಿವ ತೆರೆಯು
ಮಂದಹಾಸ ತೋರ್ಪ ನೊರೆಯು
ಮರಳಿನಿಂದ ಮೆರೆವ ಕರೆಯು
ಮರಳ ಮಧ್ಯೆ ಮಲಗಿದರೆಯು
ಸಗ್ಗವಾಯ್ತು ನರರ ತಿರೆಯು!
ಸಗ್ಗದಿಂದ ಸೊಗದ ದೇವಿ ತಿರೆಗೆ ಬಂದಳೋ?
ಬಂದು ಮುದವ ತಂದು ಕೊಂಕಣದಲಿ ನಿಂದಳೋ ?

---

# ಹುಚ್ಚನ ಪದ

ಜಗದಲಿ ನಾನೊಬ್ಬನೆ ಹುಚ್ಚ!
ಉಳಿದವರೆಲ್ಲರ ತಲೆ ಸ್ವಚ್ಛ!
ಹುಚ್ಚನ ಮಾತಿಗೆ ಹುರುಳಿಲ್ಲ!
ಉಚ್ಚರ ನುಡಿಯೇ ಜಗಕೆಲ್ಲಾ!

ಹುಚ್ಚನ ತಲೆ ತಿರುಗುತಲಿಲ್ಲ!
ತಿರೆಯೇ ತಿರುಗುತಲಿಹುದಲ್ಲ!
ತಿರೆ ತಿರುಗಲು ಲೋಕಕೆ ಕುತ್ತು!
ಭೂಲೋಕವು ನನಗೇ ಗೊತ್ತು!

ಯುದ್ಧವ ಗೆದ್ದ ಮಹಾಶಯನು
ಕಟಕನಿಗೂ ತುಸು ಮೇಲವನು!
ಕಟಕನ ಕತ್ತಿಗೆ ಕುರಿಮರಿಯೇ
ರಣರಂಗದಿ ಬರಿ ನರಬಲಿಯೇ!

ಈ ಪದ ಹಾಡಲು ನಾ ಹುಚ್ಚ!
ಎಲ್ಲಾ ಲೋಕದ ತಲೆ ಸ್ವಚ್ಛ!

## "ದೊಡ್ಡ ಒಡೆದಿರು"*

ಕೇಸವ ಕಾವರ್ತಿ |
ಕೇಳೋ ಸಂಗ್ತಿ ||
ಊರಿಗೆ ದೊಡ್ಡ ಒಡೆಯಾ |
ದೆವ್ವದಗಿಂತಲು ಕಡೆಯಾ ||ಪಲ್ಲ||

ಸಾವಿರ ಖಂಡಗ ಗೇಣಿ |
ಹೊಟ್ಟೆಗೆ ತಿನ್ನದ ಪ್ರಾಣಿ ||
ರೈತರ ತಲೆಯನು ಬೋಳ್ಸಿ |
ಕಾವರ್ತಿಯು ಆದನು ಕೇಲರ್ಶಿ ||೧||

ಹೊಟ್ಟೆಲಿ ಮಕ್ಕಳು ಇಲ್ಲಾ |
ದತ್ತಕನೂ ಸಹ ಮಳ್ಳಾ ||
ಅಪ್ಪನ ತಿಥಿಯನು ಮಾಡಾ |
ನೆಂಟರು ಬಂದರು ನೋಡಾ ||೨||

ಹಳ್ಳಿಗೆ ಹೋಗೀ ಕಾಪರ್ತಿ |
ಕದ್ದಾ ಮೊಗೆಕಾಯರ್ ಸಂವತಿ ||
ಊರಿಗೆ ಊರೇ ಕೋಪಿ |
ಛೀ ಥೂ ಅಂದರು ಪಾಪಿ ||೩||

ತುಟ್ಟೀ ಮೀನಿಗೆ ನಂಬಾ |
ಶೆಟ್ಲೀ ಪುಡಿಯನೆ ತಿಂಬಾ ||
ಪಾಯರ್ಸಕೆ ಇಲ್ಲಾ ಬೆಲ್ಲಾ |
ಉಪ್ಪಿಗು ಮೂರ್ ಕಾಸ್ ಕಳ್ಳಾ ||೪||

---

* 'ಒಡೆದಿರು' ಅಂದರೆ ‹‹ಒಡೆಯಂದಿರು››. ಉತ್ತರ ಕನ್ನಡ ಜಿಲ್ಲೆಯಲ್ಲಿ ಜಮೀನು ದಾರನಿಗೆ "ಒಡೆದಿರು" "ಒಡೆಯ" ಎಂದು ಕರೆಯುತ್ತಾರೆ.

ಲೆಕ್ಕಕೆ ಲೆಕ್ಕಾ ಹಾಕಿ |
ಇಲ್ಲದ ಸಲ್ಲದ ಬಾಕಿ ||
ಮುಗಿಯದು ರೈತನ ಸಾಲಾ |
ಇದುವೇ ಕಲಿಯುಗ ಕಾಲಾ ||೫||

ಕೇಸಿನ ಕಾಮ್ಗತಿಯು ಅಂಗ್ಡಿ |
ಯಾರಿಗು ದೊರೆಯದು ಚುಂಗ್ಡಿ ||
ತಕ್ಕಡಿ ತೂಕಾ ಸುಳ್ಳು |
ಮಾರುವ ಭತ್ತಾ ಪೊಳ್ಳು ||೬||

ಕೊರ್ಟ್ರ್ ಕಚೇರಿಲಿ ದಾವೆ |
ಮೋಸದ ಸುಳ್ಳು ನಿಕಾಲೆ ||
ರೈತನ ಹೊಲಮನೆ ಜಪ್ತಿ |
ಹೋಯಿತು ಎಲ್ಲಾ ಪ್ರಾಪ್ತಿ ||೭||

ನಿಂಗೇ ಗೌಡನ ಎತ್ತು |
ನಿಂಗಿಯ ಕೊರಳಿನ ಮುತ್ತು ||
ನುಂಗೇ ಬಿಟ್ಟನು ದುಷ್ಟಾ |
ಹೇಗಿದೆ ಬಡವರ ಕಷ್ಟಾ ||೮||

ಸ್ವಾಮೀ ವೆಂಕಟರಮಣಾ |
ಬೀಳ್ವೆವು ನೀನ್ನೀ ಚರಣಾ ||
ಕೇಳೋ ಕತೆಯದು ಕರುಣಾ |
ದುಡಿಯುವ ರೈತರ ಮರಣಾ ||೯||

— —

# ಸಾಬೂನು

ಎಲೆ ಸಾಬೂನೆ ನೋಡಲು ನೀನೆ
ಪರೋಪಕಾರಿಯು ಜಗದಲಿ ಶಾನೆ;
ದೇಹದ ಕೊಳೆಯನು ತೆಗೆಯುವೆ ತಾನೆ;
ಬುರು ಬುರು ಬುರು ಬುರು ನೊರೆಯಣ್ಣಾ,
ಹೊರಹಾಕುವೆ ಬಟ್ಟೆಯ ಮಣ್ಣ!

ಕವಿಗಳಿಗೆಲ್ಲಾ ಹಿಡಿದಿದೆ ಹುಚ್ಚು!
ಅವರಿಗೆ ನಿನ್ನಲಿ ಎಲ್ಲಿಯ ಮೆಚ್ಚು?
ಬೆಳದಿಂಗಳಶೇ ಅವರಿಗೆ ನಚ್ಚು!
ಬುರು ಬುರು ಬುರು ಬುರು ನೊರೆಯಣ್ಣಾ,
ಕವಿಗಳ ಕಣ್ಣಿಗೆ ನೀ ಸಣ್ಣ

ನಿನ್ನನು ನಿತ್ಯವು ಬಚ್ಚಲ ಮನೆಯಲಿ
ಹಚ್ಚುವರೊಡಲಿಗೆ ಬೆಚ್ಚನೆ ನೀರಲಿ;
ಆದರು ನಿನ್ನನು ನುತಿಸರು ಪದದಲಿ
ಬುರು ಬುರು ಬುರು ಬುರು ನೊರೆಯಣ್ಣಾ,
ಕಲಿಯುಗವೆಂದರೆ ಹೀಗಣ್ಣ!

ಹೊರಗಿನ ಬಣ್ಣವು ಕೆಂಪಾಗಿದ್ದರು
ಹಳದೀ ನೀಲೀ ಎಂಥದು ಇದ್ದರು,
ಹೃದಯದ ನೊರೆ ಸತತವು ಬಿಳಿ ಶುದ್ಧವು!
ಬುರು ಬುರು ಬುರು ಬುರು ನೊರೆಯಣ್ಣಾ,
ದೇಹದೊಳಡಗಿದೆ ಬಿಳಿ ಬಣ್ಣ

ಏನಯ್ಯಾ ನಿನ ದೇಹದ ಸೊಂಪು
ಅಲ್ಲದೆ ಮೈಯಿಂ ಸೂಸುವ ಕಂಪು
ನನ್ನೊಡಲಿಗೆ ನೀ ನೀಡುವ ತಂಪು
ಬುರು ಬುರು ಬುರು ಬುರು ನೊರೆಯಣ್ಣಾ,
ನಿನ್ನಾಕಾರವೊ ಬಲು ಚೆನ್ನಾ

ಹುಡುಗರು ನಿನ್ನಯ ನೀರನು ಮಾಡಿ
ಹುಲ್ಲಿನ ಕಿರು ಕೊಳವಿಯಲದ ದೂಡಿ
ಊದುತ ಚಂಡನು ಮಾಡುವರಾಡಿ !
ಬುರು ಬುರು ಬುರು ಬುರು ನೊರೆಯಣ್ಣಾ,
ಕುಣಿಸುವೆ ಮಕ್ಕಳ ಮನವನ್ನ

ಸಂಕಟ ಬಂದರು ನೀನಳಲರಿಯೆ!
ನಿನ್ನನು ತಿಕ್ಕಿದರೂ ಅದೂ ಸರಿಯೆ!
ಧವಳದ ನೊರೆಯಲಿ ನಗುತಲಿ ಮೆರೆವೆ!
ಬುರು ಬುರು ಬುರು ಬುರು ನೊರೆಯಣ್ಣಾ
ವೇದಾಂತಿಗು ನೀ ಮಿಗಿಲಣ್ಣಾ

ಒಳ್ಳೆಯದಾದರು ಎಲ್ಲಾ ಗುಣವು
ಮೈಯಲಿ ಸೇರಿದೆ ಸುಣ್ಣದ ಕಣವು;
ಉರಿವುದು ಕಣ್ಣಲಿ, ಒಂದೇ ಕ್ಷಣವು !
ಬುರು ಬುರು ಬುರು ಬುರು ನೊರೆಯಣ್ಣಾ
ನಿನ್ನಯ ಚರಿತವು ಹೀಗಣ್ಣಾ !

———

# ಉತ್ತರ ಕನ್ನಡದ ಕಚ್ಚೆ

ಯಾರಪ್ಪನ ಯಾರವ್ವನ ಇಚ್ಛೆ ?
ಉತ್ತರ ಕನ್ನಡ ಜಿಲ್ಲೆಗೆ ಕಚ್ಚೆ !

ಇದುವೇ ನಮ್ಮ ಪತಾಕೆಯ ವಸ್ತ್ರ !
ಬಡತನದಲಿ ಹೋರಾಡುವ ಶಸ್ತ್ರ !

ಅಪಜಯವಾಗುವ ಹೆದರಿಕೆಯಿಲ್ಲಾ !
ಇಡಿ ಮೈ ಮುಚುಗಲು ಚಳಿಯೇನಿಲ್ಲಾ !

'ಕಚ್ಚೆಯು ಸುಖವೇ ಬಡವರ ಮಾರ್ಗಾ !'
ಅನ್ನುವ ಜಾಣರಿಗಾವುದು ಸ್ವರ್ಗಾ ?

ಆಚೆಗೆ ತೋರಲು ಎರಡೂ ಕುಂಡೆ,
ನಾಚುವುದೇತಕೆ ದೇವರ ರಂಡೆ ?

ಲಂಗೋಟಿಯೊಳೇ ಗಾಂಧಿ ಮಹಾತ್ಮಾ!
ಉತ್ತರ ಕನ್ನಡ ಜಿಲ್ಲೆಯ ಆತ್ಮಾ!

ಬೆವರ್ಹನಿಯೊರಸಲು ಕಚ್ಚೆಯ ವಸ್ತ್ರಾ !
ಅದುವೇ ಧೋತ್ರವು, ಅದು ಕರವಸ್ತ್ರಾ !

ಕಚ್ಚೆಗು ನಮಗೂ ಜೀವದ ದೋಸ್ತಿ !
ಕಚ್ಚೆ-ರುಮಾಲೇ ಜೀವನದಾಸ್ತಿ !

ಕನ್ನಡ ಕಡಲಿನ ವೈಭವ-ದೇವಾ !
ಕಚ್ಚೆಗೆ ಹೆದರುವದೇನೋ ದೆವ್ವಾ ?

ಬಡ ಕಂಗಾಲರ ಭಾಗ್ಯದ ಚಿನ್ಹಾ !
ಉಡಿದಾರಕೆ ನೇತಾಡುವದನ್ನಾ !

ನೇತಾಡಲು ಜೋತಾಡಲು ಚಿಂದೆ,
ಕನ್ನಡ ಸಂಸ್ಕೃತಿ ಮೆರೆವುದು ಮುಂದೆ !

ಉತ್ತರ ಕನ್ನಡ ಜನತೆಯ ಭಾಗ್ಯಾ !
ಕಚ್ಚೆಗು ಬಂದಿದೆಯೇ ವೈರಾಗ್ಯಾ ?

ಕಚ್ಚೆ-ಪತಾಕೆಯು ಗಾಳಿಗೆ ತೇಲೆ,
ನೀಲ ದಿಗಂತಕೆ ಹಾರಲಿ ಮೇಲೆ !

ಸ್ವರ್ಗವನೇರಲಿ ಬಡವರ ಚಿಂದಿ !
ನೋಡಲಿ ಇಂದ್ರನ ಲೋಕದ ಮಂದಿ !

ದೇವರಿಗರ್ಪಣವಾಗಲಿ ಕಚ್ಚೆ !
ಇದುವೇ ಯುವಕರ ಹೊಸ ಯುಗದಿಚ್ಛೆ !

ಸಾಕಾಯಿತು ಪಶುಪಕ್ಷಿಯ ನಿಂದೆ !
ಮಾನವರಂತೆಯೆ ಮೆರೆವೆವು ಮುಂದೆ.

ಹೊಡೇ ಬಿಡಿ ಕಂಗಾಲರ ಬಂಡಾ,
ಉರುಳಿಸಿ ಬಿಡಿ ದಾರಿದ್ರ್ಯದ ರುಂಡಾ !

ಯಾರವ್ವನ ಯಾರಪ್ಪನ ಹಂಗು ?
ಕಾಸಿದ ಕಬ್ಬಿಣಕೆಲ್ಲಿಯ ಜಂಗು ?

———

# ನದಿಯ ಆತ್ಮಚರಿತ್ರೆ

ಸಹ್ಯಾದ್ರಿ–ಶೃಂಗದಲಿ ಜನಿಸಿದೆನು ನಾನು,
ಚಿಕ್ಕಂದಿನಲಿ ನನ್ನ ಬಾಳು ಸವಿ ಜೇನು.
ಚಲ್ಲವಾಡುತ ಜಿಗಿದು ಕುಣಿಯುತ್ತಲಿದ್ದೆ,
ಬಂಡೆಗಲ್ಲಿನ ದಾಹ ತಣಿಸುತ್ತಲಿದ್ದೆ;
ಮುಂದೆ ಕಂದರದಲ್ಲಿ ಭೋರೆಂದು ಹಾರಿ,
ಲಲಿತ ಜಲಪಾತದಲಿ ಚೇತನವ ತೋರಿ,
ಬೆಟ್ಟವನು ಬಿಟ್ಟು ಬಿಸಿ ಬೈಲೊಳಗೆ ಬಂದೆ,
ಇಷ್ಟರಲಿ ಯೌವನವು ಬಂತೆನಗೆ; ಮುಂದೆ
ದಾರಿಯಲಿ ಹಳ್ಳಗಳು ನೂರಾರು ಸೇರಿ,
ಸಂಸಾರ–ವಿಸ್ತಾರ ಬೆಳೆದು ಮಿತಿ ಮೀರಿ,
ದೋಣಿ–ಹಡಗದ ಬಳಗ ಮೈಮೇಲೆ ನಿಂತು
ಸಂಸಾರ–ಭಾರವೇ ಸಾಕಾಗಿ ಬಂತು.
ಜಂತು ಮೊಸಳೆಗಳೆಲ್ಲ ಒಡಲಲ್ಲಿ ಸೇರಿ
ಬೇನೆ ತಂದವು, ಸಾಕು ಜೀವನ, ಮುರಾರಿ !
ಮುಂದೆ ಉಸುಬಿಗೆ ಬರಲು ಮುದುಕಾದೆ, ದೇವ,
ಮಂದಮಂದನೆ ಸಾಗಿ ಜಿಣುಗಾಯ್ತು ಜೀವ.
ಇನ್ನು ಕಡಲನು ಸೇರೆ, ಮರಣದಲಿ ಶಾಂತಿ !
ಮುನ್ನೀರ ತೆರೆಯಲ್ಲಿ ಜೀವನದ ಕ್ರಾಂತಿ !

---

# ನನ್ನ ದೇಹದ ಬೂದಿ

ನನ್ನ ದೇಹದ ಬೂದಿ—ಗಾಳಿಯಲಿ ತೂರಿ ಬಿಡಿ,
ಹೋಗಿ ಬೀಳಲಿ ಭತ್ತ ಬೆಳೆಯುವಲ್ಲಿ;
ಬೂದಿ-ಗೊಬ್ಬರದಿಂದ ತೆನೆಯೊಂದು ನೆಗೆದು ಬರೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ನನ್ನ ದೇಹದ ಬೂದಿ—ಹೊಳೆಯಲ್ಲಿ ಹರಿಯ ಬಿಡಿ,
ತೇಲಿ ಬೀಳಲಿ ಮೀನ ಬಾಯಿಯಲ್ಲಿ;
ಮುಷ್ಟಿ ಬೂದಿಯ ತಿಂದು ಪುಷ್ಟವಾಗಲು ಮೀನು
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ನನ್ನ ದೇಹದ ಬೂದಿ—ಕೊಳದಲ್ಲಿ ಬೀರಿ ಬಿಡಿ,
ತಾವರೆಯು ದಿನದಿನವು ಅರಳುವಲ್ಲಿ;
ಬೂದಿ ಕೆಸರನು ಕೂಡಿ ಹೊಸ ಪಂಕಜವು ಮೂಡೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ಸತ್ತಮೇಲಾದರೂ ದೇಹ ಸೇವೆಗೆ ಸಿಲಲಿ,
ಇಂದಿಗೀ ನರಜನ್ಮ ಸೇವೆಯೆಂದು
ತನ್ನ ಸ್ವಾರ್ಥವ ನೆನೆದು ವ್ಯರ್ಥವಾಗಿದೆ, ದೇವ,
ನಿಜ ಸೇವೆಗೈಯಲಿಕೆ ಬರಲಿ ಮುಂದು

———

# ನಮ್ಮ ಕಡಲ ನಾಡು

ಹೋಗಿ ಬರುವೆನು ನಾನು ನಮ್ಮೂರಿಗಮ್ಮಾ,
ಮಾಗಿಯಲಿ ನನಗಿಲ್ಲಿ ಚಳಿ ಸೇರದಮ್ಮಾ,
ಸಾಗುವೆನು ನಾನಿಂದು ಕಡಲ ತಡಿಗಮ್ಮಾ
ಸಡಗರದ ಬೆಡಗ ಸಿರಿ ನಾಡ ಬಳಿಗೆ

ಎಲ್ಲವೂ ಸೊಗಸಲ್ಲಿ ನಮ್ಮೂರಲಮ್ಮಾ,
ಅಲ್ಲಿರುವುದೆಲ್ಲವೂ ಇಲ್ಲಿಲ್ಲವಮ್ಮಾ!
ನಮ್ಮ ಗಂಜಿಗೆ ನಿಮ್ಮ ಗೋದಿ ಯಾಕಮ್ಮಾ
ಅಕ್ಕಿ ಬೆಳೆಯುವ ಚೊಕ್ಕ ನಾಡಿನೊಳಗೆ!

ಇಲ್ಲಿ ಚಳಿ ಬಲು ಹೆಚ್ಚು, ಅಲ್ಲವೇನಮ್ಮಾ?
ನಮ್ಮೂರು ಬಲು ಮೆಚ್ಚು, ಸರಿ ಬೆಚ್ಚಗಮ್ಮಾ.
ಸಕಲಾತಿ ಬೇಕಿಲ್ಲ, ಮುಂಡು ಸಾಕಮ್ಮಾ,
ನಡುಗಿಲ್ಲ ಕಡಲ ತಡಿ ನಾಡಿನೊಳಗೆ

ಅಲ್ಲಿಹಳು ನಮ್ಮಜ್ಜಿ ಸೀಲಿ ನಿಂಗಮ್ಮ,
ಎಲ್ಲ ಕತೆ ಬಲ್ಲವಳು, ಕತೆಯಲ್ಲಿ ಗುಮ್ಮ,
ಬೆಲ್ಲದಂತಹ ಚರಿತ ಚಲ್ಲ, ಸೊಗಸಮ್ಮಾ;
ಹೊರಡುವೆನು ಪಡುವಲದ ಕಡಲ ತಡಿಗೆ

ಹಣ್ಣಿಗೂ ಬೆಲೆಯಿಲ್ಲ ನಮ್ಮೂರಲಮ್ಮಾ!
ಗೇರು ಹಣ್ಣನು ಕೆಡವಿ ತಿನ್ನುವುದು ನಮ್ಮ
ಊರ ಮಕ್ಕಳ ಹಕ್ಕು, ಚಲ್ಲಾಟವಮ್ಮಾ;
ತೆರಳುವೆನು ಕನ್ನಡದ ಕಡಲ ಕಡೆಗೆ

---

# ಚೀನದ ಕ್ರಾಂತಿ

ಏಶಿಯಾ ಖಂಡದಲಿ ನವಕಿರಣ-ಮಾರ್ತಾಂಡ
ಉದಯವಾದನು, ಬೇಗನೇಳಿರಣ್ಣಾ;
ಸುಪ್ರಭಾತದ ಸೊಂಪು, ಪಕ್ಷಿಗಳ ಸ್ವರದಿಂಪು,
ಮೂಡಣದ ಬಾನೊಳಗೆ ಕೆಂಪು ಬಣ್ಣ

ಕಪ್ಪು ಶತಮಾನಗಳ ದಪ್ಪ ಕತ್ತಲು ಹರಿದು
ಬೆರಗಾಗೆ ದೂರಾಯ್ತು ನರನ ಭ್ರಾಂತಿ;
ಹೊಸ ಹುರುಪು, ಹೊಸ ರೂಪು, ಹೊಸದು ಜೀವನದಾಸೆ
ಹೊಸ ಯುಗದ ಕೋರಿಕೆಯು ಚೀನ ಕ್ರಾಂತಿ

ಹೊಸ ತರದ ಹೂವುಗಳು ದೆಸೆದೆಸೆಗೆ ಅರಳಿದವು,
ಮೊಗ್ಗೆಯೇ ಕಾಣಿಸದು, ವಿಧಿಯ ಮಾಟ;
ಎಲ್ಲ ಗಿಡಬಳ್ಳಿಗಳು ಒಮ್ಮೆಗೇ ಹೂ ಬಿಡಲು
ಹಿಂದೆಂದಿಗೂ ನೋಡದಂಥ ನೋಟ

ಯಾವ ಹೂವಿನ ಬಣ್ಣ ಹೇಳುವರು ಯಾರಣ್ಣ ?
ಎಲ್ಲವೂ ಹೊಸದಣ್ಣ ಕಣ್ಣ ಮುಂದೆ;
ಹಸರು ಹಾಡುವ ವೃಕ್ಷ, ಎಸಳು ಬಾಡದ ಪುಷ್ಪ,
ಹೊಸ ದೃಷ್ಟಿಯೇ ಹುಟ್ಟಿ ಬಂತು ಇಂದೆ

ಚೀನ ದೇಶದ ಕ್ರಾಂತಿ ಬ್ರಹ್ಮಾಂಡಕದು ವಾಂತಿ,
ಕಾರಿ ಹೋಯಿತು ಹತ್ತು ಯುಗದ ಪಿತ್ತ;
ಕೆಟ್ಟ ಪಾಪದ ಗಂಟು, ಧರೆಗೆ ಹತ್ತಿದ ಅಂಟು,
ತೊಳೆದು ಹೋಯಿತು ದೊಡ್ಡದೊಂದು ಕುತ್ತ

## ಚೀನದ ಕ್ರಾಂತಿ

ರಕ್ಷಕನ ಹೆಸರಿನಲಿ ರಾಕ್ಷಸನು ತಾನಾಗಿ
ಜೀವಭಕ್ಷಕನಾಗೆ 'ದೇಶಭಕ್ತ',
ಜನರ ದುಃಖದ ಹೊಳೆಯು ಕಾಲಪ್ರವಾಹದಲಿ
ಸೆಳೆದು ಹೋದನು; ಚೀನದೇಶ ಮುಕ್ತ

ಮನುಜ ಮಾನವನಾಗಿ ಬದುಕುವುದೆ ನಿರ್ಧಾರ,
ನಿರ್ಧಾರಕಾಗಿಯೇ ಚೀನಕ್ರಾಂತಿ;
'ಅನ್ನ ದೇವರ ಮುಂದೆ ಇನ್ನು ದೇವರು ಇಲ್ಲ'
ಸಿದ್ಧಾಂತ ಸಿದ್ಧಿಯಲಿ ನರನ ಶಾಂತಿ

ಬುದ್ಧ ದೇವನ ಕನಸು ನನಸಾಗಿ ಬಂತೇನೊ ?
ಮಾನವನ ಸಂಸ್ಕೃತಿಯು ಹೊಸದು ಹಣ್ಣೊ ?
ಬೋಧಿವೃಕ್ಷವು ತಿರುಗಿ ಚಿಗುರೊಡೆದು ಫಲಿಸಿತೋ ?
ಬೌದ್ಧತತ್ವವು ಕ್ರಾಂತಿಗೆರೆಯು ಮಣ್ಣೊ ?

ಚೀನ ದೇಶದ ಗಾಳಿ ಹೂಣ ದೇಶಕೆ ಬೀಸಿ
ಏಶಿಯದ ದೆಸೆದೆಸೆಗೆ ಸುಳಿವುದೇನೊ ?
ಹೂವಿಂದ ಹೂವಿನಲಿ ಭಾವಭೃಂಗವು ಹಾರೆ,
ಕ್ರಾಂತಿಬೀಜವ ಗಾಳಿ ತರುವದೇನೊ ?

ಮೂಡಣದ ಹೊಸ ತಾರೆ ಬಯಕೆ-ಬಾನಲಿ ತೋರೆ,
ಹಸಿವೆಯಿಂ ಕಂಗೆಟ್ಟ ನರನ ಮನಸೇ
ಕ್ರಾಂತಿಬೀಜಕೆ ಭೂಮಿ; ಹದವಾಗಿ ನಿಂತಿರಲು,
ಪಶ್ಚಿಮ ಕುಬೇರರಿಗೆ ಕೆಟ್ಟ ಕನಸೇ ?

ಮೂಡಲದ ಕಡಲ ತೆರೆ ಹಿಗ್ಗಿ ಮುಗಿಲಿಗೆ ಹಾರೆ,
ಲೋಕವಾತ್ಸಲ್ಯವೇ ಉಕ್ಕಿ ಬಂತು;
ಪಕ್ಕಿಗೂ ಆನಂದ, ಚುಕ್ಕಿಗೂ ಸಾನಂದ,
ಸತ್ತವರಿಗೂ ಕುಣಿವ ಹಕ್ಕು ಬಂತು !

———

# ಡೊಂಬರಾಟ

[ ಪುರಂದರ ದಾಸರ ಪದದ ಮಾದರಿಯಲ್ಲಿ ]

ಡೊಂಬರ ಆಟವ ನಿಲ್ಲಿಸಿರಯ್ಯಾ
ಡೊಂಬರ ಆಟವ ನಿಲ್ಲಿಸಿರೋ;
‘ಭಾರತ ಭೂಮಿಗೆ ವೈಭವ ಬಂದಿದೆ’
ಎನ್ನುವರೆಲ್ಲರು ಆಲಿಸಿರೋ ||ಪ||

ಪಂಡಿತರೆಲ್ಲರು ಬುದ್ಧಿಯ ಮಲ್ಲರು,
ಸರ್ರನೆ ಸ್ವರ್ಗಕೆ ಹಾರಿದರೋ;
ನಮ್ಮ ಸ್ವರಾಜ್ಯದ ಜನಪದ ಭಾಗ್ಯದ
ಕೀರ್ತಿ ದಿಗಂತಕೆ ಬೀರಿದರೋ!

‘ಉತ್ತಮ ನಾಯಕ ಸಿದ್ಧಿ ವಿನಾಯಕ
ಮಂಗಲದಾಯಕ ಮಂತ್ರಿಗಳೋ?
ಆರತಿ ಬೆಳಗಲು ಭಾರತಿ ನಲಿದಳು!
ತಂದ ಪ್ರಸಾದಕೆ ತಂತ್ರಿಗಳೋ?

ಹೇಳಿದ ಮಾತಿಗೆ ತಾಳವ ಹಾಕುವ
ಹಗರಣದೊಳಗಿನ ಸೋಗುಗಳೋ:
ಒಳಗಿನ ಆಸೆಗೆ ಈಚೆಗೆ ಆಚೆಗೆ
ನಾಲಿಗೆ ನೆಕ್ಕುವ ‘ತ್ಯಾಗಿಗಳೋ;

ಕವಿಗಳ ವೃಂದವು ಬಣ್ಣಿಸಲಂದವು,
ಒಂದೇ ಪದವನು ಹಾಡುವರೋ
ಜೀವನವಿಂದಿಗೆ ಪಾವನವೆಂಬರು,
ಮೃಗಜಲವನ್ನೇ ನೋಡುವರೋ

## ಡೊಂಬರಾಟ

ಹೂವು ತುರಾಯೀ ತೆಂಗಿನ ಕಾಯೀ
ಬಾಳೆಯ ಹಣ್ಣೂ ದೇವರಿಗೋ ?
ದೇವರ ಹೆಸರಲಿ ದೇಶದ ಜನದಲಿ
ಜನರಿಗೆ ವಂಚನೆ ಈ ವರೆಗೋ

ಮಂತ್ರಿಗಳುಕ್ತಿಯೆ ಜೀವನ-ಮುಕ್ತಿಯೆ ?
ಮನದೊಳಗಾಸೆಯು ಉಕ್ಕುವದೋ;
ಉಕ್ಕಿದ ಕಡಲಲಿ ತೇಲುವ ಬೆಂಡದು
ಬೇಕಾದವರಿಗೆ ಸಿಕ್ಕುವದೋ !

ಕಳ್ಳರ ಸಂತೆಯು, ಲಂಚದ ಚಿಂತೆಯು,
ಉತ್ತಮ ಕಾಳೂ ಜೊಳ್ಳಾಯ್ತೋ !
ಭಾರತ ಭೂಮಿಯ ಭವನದ ಜಂತೆಯು
ಒಳಗಿಂದೊಳಗೇ ಪೊಳ್ಳಾಯ್ತೋ !

ಹಗ್ಗದ ಮೇಲಿನ ಹಗರಣ ಕಂಡರೆ
ಹಿಗ್ಗುವ ಮನಸಿದು ಮರುಳಲ್ಲೋ ?
ಒಗ್ಗರಣೆಯ ಬರಿ ವಾಸನೆಯಿಂದಲಿ
ಹೊಟ್ಟೆಯು ತುಂಬುವ ಪರಿಯಲ್ಲೋ ?

ಸಕ್ಕರೆಗಿಂತಲು ಬೆಲ್ಲವು ತುಟ್ಟಿ !
ಹಗಲೇ ಕತ್ತಲು ! ಕಾಣಿಸದೋ ?
ಭಾರತ ಭೂಮಿಯ ವೈಭವ ಗಟ್ಟಿ !
ಕುರುಡನಿಗೂ ಸಹ ಕಾಣುವದೋ !

ಅಟ್ಟದ ಮೇಲಿನ ಸೆಟ್ಟಿಯ ಮನೆಯಲಿ
ವೈಭವ-ಸಂಭ್ರಮ ಜರುಗುವದೋ;
ಮೆಟ್ಟಿಲ ಹತ್ತರ, ಹೊಟ್ಟೆಯ ನೆತ್ತರ
ಕಾರುತ ಜೀವವು ಕೊರಗುವದೋ !

ಬಡವರ ಸಂದಣಿ, ಹಸಿವೆಯ ಕಂಬನಿ.
    ಸಾಯಲು ಚೀರುವ ಭೂತಗಳೋ !
ಸಾಯದೆ ಬದುಕಲು ಭಾಗತ-ಮಕ್ಕಳು
    ಜಗದಲಿ ಬಾಳುವ ಪ್ರೇತಗಳೋ !

ವೈಭವ- ತಾರೆಯು ಕಾಣುವದೇನೋ ?
    ಕಂಡರೆ ನಮಗೂ ಕಾಣಿಸಿರೋ:
ಸುಮ್ಮನೆ ಗುಲ್ಲಿಗೆ ಮರುಳಾಗದೆ ಮನ.
    ಪಿತಲನ ದುಃಖವ ಮಾಣಿಸಿರೋ

---

# ನಾನು ಸಾಯಲು—

ನಾನು ಸಾಯಲು ನನ್ನ ಕವನಗಳ ಮರೆತು ಬಿಡಿ.
ಸತ್ತ ಮೇಲವು ಮತ್ತೆ ಯಾಕೆ ಬೇಕು ?
ಈ ಕವನ, ಆ ಕವನ, ಹೇಗಿತ್ತು ಕವಿಯ ಮನ,
ಎಂಬ ಚರ್ಚೆಯ ಮಾತು ಮುಗಿಯಬೇಕು

ಸತ್ತ ಮೇಲಾದರೂ ಶಾಂತಿ ಹೊಂದಲಿ ಚಿತ್ತ,
ಈ ಹೊತ್ತು ಮನಕೆ ಬೇಸರಿಕೆ ಭ್ರಾಂತಿ;
ಹಾಳು ಕವನವು ಬೇಡ, ಇನ್ನು ಜನನವು ಬೇಡ,
ಬೇಕೆನಗೆ ಚಿರಕಾಲ ಶಾಂತಿ ಶಾಂತಿ

———

# ಹಿನ್ನುಡಿ

ನನ್ನ ಭಾವದ ಕವನ,
ನನ್ನ ಗಾನದ ತನನ,
ನನ್ನದೆಂಬುವ ಜಂಬ ಸಾಕು ದೇವಾ.
ನಿನ್ನ ಕೃಪೆಯಿಂದಲೇ
ಬನ್ನಿ ಗಿಡ ಹೂ ಬಿಡಲು,
ನಿನ್ನ ಸೇವೆಗೆ ನೀನೆ ತಂದೆ ಹೂವ !

ಪಕ್ಕಿಗಳ ಇಂಚರವು,
ಚುಕ್ಕಿ ಮಿಂಚುವ ತೆರವು,
ಉಕ್ಕಿ ಮೊರೆಯುವ ತೆರೆಯು ನಿನ್ನ ಕವನ.
ನನ್ನದೆಂಬುವ ಗೀತ
ನಿನ್ನದೇ ಸಂಗೀತ,
ಎಲ್ಲೆಲ್ಲಿಯೂ ನಿನ್ನ ಭಾವ-ಪವನ

ನನ್ನ ಕನ್ನಡ ನುಡಿಗೆ
ನಿನ್ನ **ಹಿನ್ನುಡಿ**ಯಿರಲು,
ನನ್ನದೆಂಬುದು ತಾನೆ ಕನ್ನಡಿಯ ಬಿಂಬ:
ಪ್ರೊಡಪಿಯಲಿ ನಾಲ್ದೆಸೆಗೆ
ನೀನೆ ಹಾಡುತಲಿರಲು,
ನಿನ್ನ ಭಾವವೆ ನನ್ನ ನುಡಿ-ಗುಡಿಯ ಕಂಬ !

———